
The Indian Institute
Bangalore

# ಶಿವಪುರಾಣ

ಈ ಪ್ರಪಂಚವು ಸೃಷ್ಟಿಯಾಗುವುದಕ್ಕಿಂತ ಮೊದಲು ಬರಿಯ ನೀರಿನ ಹೊರತು ಬೇರೆ ಯಾವ ವಸ್ತುಗಳೂ ಇರಲಿಲ್ಲ. ಸರ್ವಶೂನ್ಯವಾದ ಅಂಧಕಾರವೇ ಎಲ್ಲೆಲ್ಲೂ ಕವಿದಿತ್ತು. ಆ ಅಂಧಕಾರದೊಳಗೆ ಒಂದಾನೊಂದು ತೇಜಸ್ಸು ಒಂದು ಕಡೆಯಲ್ಲಿ ಕಾಣುತ್ತಿತ್ತು. ಕಾಲಕ್ರಮದಲ್ಲಿ ಅದು ಜ್ಯೋತಿರ್ಲಿಂಗದ ಆಕಾರವನ್ನು ತಾಳಿತು. ಅದುವೇ ಶಿವಪರಮೇಶ್ವರನ ಲಿಂಗಾಕೃತಿ. ಆ ಜ್ಯೋತಿರ್ಲಿಂಗದ ಅರ್ಧಭಾಗದಿಂದ ಮಹಾಶಕ್ತಿಯೊಂದು ಹುಟ್ಟಿತು. ಆ ಮಹಾಶಕ್ತಿಯನ್ನೇ ಪ್ರಕೃತಿ ಎಂದೂ, ಮಹಾಮಾಯೆ ಎಂದೂ ಕರೆಯುತ್ತಾರೆ. ಜ್ಯೋತಿರ್ಲಿಂಗದೊಂದಿಗೇ ಇದ್ದುದರಿಂದ ಪರಮೇಶ್ವರಿ ಎಂತಲೂ ಹೇಳುತ್ತಾರೆ.

ಕಾಲಕ್ರಮದಲ್ಲಿ ಪರಮೇಶ್ವರೀ ಪರಮೇಶ್ವರರು ಮಹಾವಿಷ್ಣುವನ್ನು ಸೃಷ್ಟಿ ಮಾಡಿದರು. ಆ ಮಹಾವಿಷ್ಣುವಿನ ನಾಭಿಯೊಳಗಿನಿಂದ ಮಹಾ ಪದ್ಮವೊಂದು ಹುಟ್ಟಿಕೊಂಡು ಬಂತು. ಅದು ಅನೇಕ ಸಾವಿರ ಯೋಜನಗಳಷ್ಟು ನೀಳವಾಗಿ ಅತ್ಯಾಶ್ಚರ್ಯಕರವಾಗಿದ್ದಿತು. ಆ ಮಹಾ ಪದ್ಮದಲ್ಲಿ ಐದು ಮುಖಗಳೊಂದಿಗೆ ಕೂಡಿದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನ ಜತೆಯಲ್ಲಿಯೇ ಸರಸ್ವತಿಯೂ ಹುಟ್ಟಿದಳು.

ಪ್ರಪಂಚವೆಲ್ಲಾ ಜಲಮಯವಾಗಿರುವುದನ್ನು ಗಮನಿಸಿ ಬ್ರಹ್ಮನಿಗೆ ಯೋಚನೆಯುಂಟಾಯಿತು. ತನ್ನ ಜನ್ಮಸ್ಥಾನವಾದ ಮಹಾಪದ್ಮದ ಆದಿ ಅಂತಗಳನ್ನು ತಿಳಿಯಬೇಕೆಂದುಕೊಂಡು ಬ್ರಹ್ಮನು, ಅದರ ನಾಳವನ್ನು ಹಿಡಿದು ಊರ್ಧ್ವ ಹಾಗು ಅಧೋಲೋಕಗಳ ನಡುವೆ ಅನೇಕಬಾರಿ ಹೋಗಿ ತನ್ನ ಪದ್ಮಗರ್ಭವನ್ನು ಸೇರಿ ಏನೂ ತಿಳಿಯದೆ ಕುಳಿತನು. ತನ್ನಂತೆಯೇ ಅವನ ಬಾಯಿಯಿಂದ ಓಂಕಾರ ನಾದವು ಹೊರಡ ತೊಡಗಿತು. ಅವನ ಓಂಕಾರ ಜಪಕ್ಕೆ ಪ್ರತಿಫಲವಾಗಿ ವಿಷ್ಣು ಅವನ ಇದಿರಿನಲ್ಲಿ ಪ್ರತ್ಯಕ್ಷನಾಗಿ ನಿಂತನು. ಸೃಷ್ಟಿಯಲ್ಲಿ ತಾನೇ ಮೊದಲಿನವನೆಂದು ತಿಳಿದುಕೊಂಡಿದ್ದ ಬ್ರಹ್ಮನು ವಿಷ್ಣುವನ್ನು ನೋಡಿ ಆಶ್ಚರ್ಯಗೊಂಡು "ಯಾರು ನೀನು? ಎಲ್ಲಿಂದ ಬಂದೆ? ಏಕೆ ಬಂದೆ?" ಎಂದು ಕೇಳಿದನು.

## ೧. ದಕ್ಷಯಜ್ಞ



"ಪ್ರಪಂಚವನ್ನು ಸೃಷ್ಟಿಸುವ ಕಾರ್ಯಕ್ಕಾಗಿ ನಾನು ನಿನ್ನನ್ನು ನನ್ನ ನಾಭಿಯಿಂದ ಹುಟ್ಟಿಸಿದೆನು. ನಾನು ವಿಷ್ಣು" ಎಂದನು ವಿಷ್ಣು.

ಬ್ರಹ್ಮನು ಅಹಂಕಾರದಿಂದ, "ನನ್ನ ಮುಂದೆ ನಿನ್ನ ಜಂಭದ ಮಾತುಗಳನ್ನು ಹೇಳಬೇಡ. ಸಾಧ್ಯವಿದ್ದರೆ ನನ್ನೊಂದಿಗೆ ಯುದ್ಧಕ್ಕೆ ಬಾ. ನಾನು ಸ್ವಯಂಭೂ ಆಗಿ ಹುಟ್ಟಿದವನು, ಜಗತ್ಕರ್ತೃ ನಾನೇ" ಎಂದನು.

ಆಗ ವಿಷ್ಣು "ನಿಜವು ಈಗಲೇ ತಿಳಿಯುತ್ತದೆ" ಎಂದು ಶಿವನನ್ನು ಧ್ಯಾನಿಸಿದನು. ಪರಮೇಶ್ವರನು ಜ್ವಾಲಾಲಿಂಗ ರೂಪದಲ್ಲಿ ಬ್ರಹ್ಮ ವಿಷ್ಣುಗಳ ನಡುವೆ ಪ್ರತ್ಯಕ್ಷನಾದನು. ಆಗ ವಿಷ್ಣು, ಬ್ರಹ್ಮನೊಂದಿಗೆ "ಈ ಜ್ವಾಲಾಲಿಂಗದ ಆದಿ ಅಂತಗಳನ್ನು ಕಂಡು ಹಿಡಿಯಲು ನಾವಿಬ್ಬರೂ ಹೊರಡೋಣ. ಯಾರು ಕಂಡು ಹಿಡಿಯುವರೋ ಅವರೇ ದೊಡ್ಡವರು" ಎಂದನು. ಬ್ರಹ್ಮನು ಆಗಬಹುದೆಂದನು. ಆದರೆ ಆ ಪ್ರಯತ್ನದಲ್ಲಿ ಇಬ್ಬರೂ ಸೋತುಹೋಗಿ ಯಥಾ ಸ್ಥಾನಕ್ಕೆ ತಿರುಗಿಬಂದು, ಪರಮೇಶ್ವರನನ್ನೇ ಪ್ರಾರ್ಥನೆ ಮಾಡ ತೊಡಗಿದನು.

ಪರಮೇಶ್ವರನು ಅವರ ಮುಂದೆ ಐದು ಮುಖಗಳಿಂದ ಪ್ರತ್ಯಕ್ಷನಾಗಿ, "ಬ್ರಹ್ಮಾ, ನೀನು ಪಂಚಭೂತಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಲಿಕ್ಕಾಗಿ ಈ ವಿಷ್ಣುವಿನ ನಾಭೀ ಕಮಲದಲ್ಲಿ ನನ್ನ ಆದೇಶಾನುಸಾರವಾಗಿ ಹುಟ್ಟಿಸಲ್ಪಟ್ಟವನು. ಆದುದರಿಂದ ನೀನು ಸೃಷ್ಟಿ ಕಾರ್ಯವನ್ನು ಪ್ರಾರಂಭಿಸಬೇಕು. ಅದೇ ನಿನ್ನ ಕೆಲಸ" ಎಂದನು.

ಅದನ್ನು ಕೇಳಿ ಬ್ರಹ್ಮನು ಪರಮೇಶ್ವರನನ್ನು ನೋಡಿ, "ಹೀಗೆ ಆಜ್ಞೆಮಾಡುವ ನೀನು ಯಾರು? ನನಗೆ ಸಮಾನನಾಗಿ ನಿನಗೆ ಐದು ಮುಖಗಳು ಏಕೆ ಬಂದಿವೆ? ನಾನು ಸೃಷ್ಟಿ ಕಾರ್ಯ ನಡೆಸುವ ಸೃಷ್ಟಿ ಕರ್ತನಾದುದರಿಂದ ನನಗೆ ಎಲ್ಲಾ ದಿಕ್ಕುಗಳೂ ಕಾಣುವಂತೆ ಐದು ಮುಖಗಳಿರಬೇಕಾದ್ದು ನ್ಯಾಯ. ನಿನಗೇಕೆ?" ಎಂದು ಕೇಳಿದನು.

ಆ ಪ್ರಶ್ನೆಯಿಂದ ಪರಮೇಶ್ವರನು ರುದ್ರಾವತಾರ ತಾಳಿದನು. ತನ್ನ ಎಡಗೈಯ ಕಿರಿಬೆರಳಿನ ಉಗುರನ್ನೇ ಕತ್ತಿಯ ಹಾಗೆ ಮಾಡಿ ಬ್ರಹ್ಮನ ಐದನೆಯ ತಲೆಯನ್ನು ಕಡಿದು ಹಾಕಿದನು. ಅದರಿಂದ ಬ್ರಹ್ಮನ ಅಹಂಕಾರವು ಅಳಿಯಿತು. ರಕ್ಷಿಸುವಂತೆ ಕೈಜೋಡಿಸಿ ಪರಮೇಶ್ವರನನ್ನು ಪ್ರಾರ್ಥಿಸಿದನು ಬ್ರಹ್ಮ.

ಪರಮೇಶ್ವರನು ರೌದ್ರತೆಯನ್ನು ಬಿಟ್ಟು, ಸೌಮ್ಯ ರೂಪನಾಗಿ ಶಾಂತತೆಯಿಂದ, "ಓ ಬ್ರಹ್ಮಾ, ಸೃಷ್ಟಿ ಕಾರ್ಯಕ್ಕೆ ನೀನೂ, ಆ ಸೃಷ್ಟಿಯನ್ನು ರಕ್ಷಿಸುವ ಕಾರ್ಯಕ್ಕೆ ವಿಷ್ಣುವೂ ಸೃಷ್ಟಿಸಲ್ಪಟ್ಟಿರುವಿರೆಂದು ತಿಳಿಯಿರಿ. ನಾನು ಲಯಕಾರಕನಾಗಿ ರುದ್ರನಾಗಿಯೂ, ಶಿವನಾಗಿಯೂ, ಈಶ್ವರನಾಗಿಯೂ ಕರೆಯಿಸಿಕೊಳ್ಳುತ್ತೇನೆ. ಜ್ವಾಲಾಲಿಂಗವನ್ನೇ ಪಾರ್ಥಿವಲಿಂಗವೆಂದೂ, ಶಿವಲಿಂಗವೆಂದೂ ಪೂಜಿಸತಕ್ಕದ್ದು. ನಾನು

ಯಾವಾಗಲೂ ಲಿಂಗೈಕ್ಯನಾಗಿರುತ್ತೇನೆ." ಎಂದು ಹೇಳಿ ಜ್ವಾಲಾಲಿಂಗದೊಳಗೆ ಐಕ್ಯವಾಗಿ ಹೋದನು.

ಆಮೇಲೆ ಬ್ರಹ್ಮನು ವಿಷ್ಣುವಿನಿಂದ ವೇದಗಳೇ ಮೊದಲಾದುವನ್ನು ತೆಗೆದುಕೊಂಡು, ಪದ್ಮಾಸನದ ಮೇಲೆ ಕುಳಿತು ಓಂಕಾರವನ್ನು ಜಪಿಸಿಕೊಂಡಿರುವಾಗ, ನೀರಿನ ಮೇಲೆ ತೇಲುತ್ತಾ ಒಂದು ಮೊಟ್ಟೆ ಬ್ರಹ್ಮನ ಕಡೆಗೆ ಬಂದಿತು. ಬ್ರಹ್ಮನು ಅದನ್ನು ಆಶ್ಚರ್ಯದಿಂದ ನೋಡಿದನು. ಅಷ್ಟರಲ್ಲಿ ಆ ಮೊಟ್ಟೆಯಿಂದ 'ಓಂ' ಎಂಬ ಶಬ್ದವು ಹೊರಡ ತೊಡಗಿತು. ಬ್ರಹ್ಮನು ಕುತೂಹಲದಿಂದ ಆ ಓಂಕಾರವನ್ನು ಹಿಡಿದು ಹೋಗಿ ಮೊಟ್ಟೆಯೊಳಗೆ ಸೇರಿಕೊಂಡನು. ಮೊಟ್ಟೆಯೊಳಗೆಲ್ಲಾ ಗಾಢಾಂಧಕಾರವೇ ಇಡುಗಿಕೊಂಡಿತ್ತು. ಬ್ರಹ್ಮನು ಅದರೊಳಗೆ ತನ್ನ ಶರೀರವನ್ನು ವಿಸರ್ಜಿಸಿ ಚತುರ್ಮುಖನಾಗಿ ಮತ್ತೆ ಹುಟ್ಟಿದನು. ಹೀಗೆ ಬ್ರಹ್ಮನು ಅಂಡದೊಳಗಿನಿಂದ ಹೊರಗೆ ಬರುವಾಗ ಅಂಡವು ಎರಡು ಭಾಗವಾಗಿ ಸೀಳಿ ಕೆಳಗಿನ ಭಾಗವು ಭೂಮಿಯಾಗಿ, ಮೇಲಿನ ಭಾಗವು ಆಕಾಶವಾಗಿ ಕಾಣತೊಡಗಿತು. ಆ ಹೊತ್ತಿಗೆ ನೀರೆಲ್ಲಾ ಇಂಗಿಹೋಗಿತ್ತು.

ಇದನ್ನು ನೋಡಿ ಬ್ರಹ್ಮನು ಬಹಳ ಸಂತೋಷಪಟ್ಟು, ಭೂಮಿಯ ಮೇಲೆ ಸಮಸ್ತ ಚರಾಚರಗಳನ್ನೂ ಸೃಷ್ಟಿ ಮಾಡಲು ಪ್ರಾರಂಭಿಸಿದನು. ಬ್ರಹ್ಮನು ಸೃಷ್ಟಿ ಮಾಡಿದ ಮೊದಲನೆಯವರು ಸನಕ, ಸನಂದನಾದಿಗಳೇ. ಅವರು ಸೃಷ್ಟಿ ಮಾಡುವುದರಲ್ಲಿ ಯಾವ ಆಸಕ್ತಿಯನ್ನೂ ತೋರಿಸದೆ ಪರಮೇಶ್ವರನನ್ನು ಧ್ಯಾನಿಸುತ್ತ ತಪಸ್ಸುಮಾಡಲು ಹೊರಟುಹೋದರು. ಅದನ್ನು ನೋಡಿ ಬ್ರಹ್ಮನು ಗಟ್ಟಿಯಾಗಿ ರೋದನ ಮಾಡ ತೊಡಗಿದನು.

ಬ್ರಹ್ಮನು ಕಣ್ಣೀರು ಸುರಿಸುತ್ತಾ, ಒಂದೇ ಸಮನೆ ರೋದಿಸಿಕೊಂಡಿರುವಾಗ, ಅವನ ಕಣ್ಣೀರಿನಿಂದ ಮಹಾ ತೇಜಸ್ಸಿನೊಂದಿಗೆ ಶಿವನು ಹುಟ್ಟಿದನು.



ಶಿವನು ಬೆಳ್ಳಗಿನ ಪ್ರಕಾಶವಂತನಾಗಿ ಹತ್ತು ದಿಕ್ಕುಗಳನ್ನೂ ಬೆಳಗಿಸುವುದನ್ನು ನೋಡಿ ಬ್ರಹ್ಮನು, ಆಶ್ಚರ್ಯಪಡುತ್ತ, "ಯಾರು ನೀನು?" ಎಂದು ಪ್ರಶ್ನಿಸಿದನು.

"ನಾನು ಶಿವನು, ರುದ್ರನು, ಪರಮೇಶ್ವರನು" ಎಂದು ಉತ್ತರಿಸಿದನು ಶಿವ.

ಆಗಲೇ ವಿಷ್ಣು ಕೂಡಾ ಅಲ್ಲಿ ಪ್ರತ್ಯಕ್ಷನಾಗಿ, "ಬ್ರಹ್ಮಾ! ನೀನು ಸೃಷ್ಟಿಸಿ, ನಾನು ಪೋಷಿಸುವ ಎಲ್ಲಾ ಚರಾಚರಗಳನ್ನೂ ಲಯಮಾಡಲು ಆ ಶಿವನೇ ಈಗ ಈ ರೂಪದಲ್ಲಿ ಹುಟ್ಟಿದ್ದಾನೆ" ಎಂದನು.

ಆ ಮೇಲೆ ಆ ಮೂವರಿಗೂ ವಾಸಸ್ಥಳಗಳು ನಿರ್ಣಯವಾದುವು. ಬ್ರಹ್ಮನಿಗೆ ಸತ್ಯಲೋಕವೂ, ವಿಷ್ಣುವಿಗೆ ವೈಕುಂಠವೂ, ಶಿವನಿಗೆ ಕೈಲಾಸವೂ ವಾಸಸ್ಥಳಗಳೆಂದು ಗೊತ್ತಾಯಿತು. ಅದರಂತೆ ಬ್ರಹ್ಮನು ಸತ್ಯಲೋಕಕ್ಕೆ ಹೋಗಿ ತನಗೆ ಸಹಾಯಕರಾಗಿ ಮರೀಚಿ, ಕಶ್ಯಪ, ದಕ್ಷ, ಗೌತಮ, ವಸಿಷ್ಠ, ಕರ್ದಮ



ಮೊದಲಾದ ಒಂಬತ್ತು ಮಂದಿಗಳನ್ನು ಉಪ ಬ್ರಹ್ಮರೆಂದು ಸೃಷ್ಟಿ ಮಾಡಿದನು.

ಇವರಲ್ಲಿ ದಕ್ಷನಿಗೆ ಅರವತ್ತನಾಲ್ಕು ಮಂದಿ ಕುಮಾರಿಯರಾದರು. ಆ ಕುಮಾರಿಯರಲ್ಲಿ ಅದಿತಿ ಮೊದಲಾದ ಹತ್ತು ಕನ್ಯೆಯರನ್ನು ಕಶ್ಯಪನು ಮದುವೆ ಮಾಡಿಕೊಂಡನು. ಆದರಿಂದ ಅನೇಕ ಮಕ್ಕಳನ್ನು ಪಡೆದನು. ಅವನ ಹೆಂಡತಿಯರಲ್ಲಿ ಅದಿತಿಗೆ ಇಂದ್ರನೇ ಮೊದಲಾದ ದೇವತೆಗಳು ಹುಟ್ಟಿದರು. ದಿತಿಗೆ ಹುಟ್ಟಿದ ಮಕ್ಕಳು ದೈತ್ಯರೆಂದು ಹೆಸರು ಪಡೆದರು, ವಿನತೆ ಎಂಬವಳಿಗೆ ಗರುತ್ಮಂತನೂ, ಅನೂರುವೂ ಕುಮಾರರಾಗಿ ಹುಟ್ಟಿದರು. ಕದ್ರು ಎಂಬವಳಿಗೆ ಸರ್ಪಗಳು ಮಕ್ಕಳಾಗಿ ಹುಟ್ಟಿದುವು. ಸ್ವನಾ ಎಂಬ ಕಶ್ಯಪನ ಹೆಂಡತಿಯಿಂದ ಯಕ್ಷರೂ, ರಾಕ್ಷಸರೂ ಹುಟ್ಟಿದರು.

ಶಿವನನ್ನೇ ಮದುವೆಯಾಗಬೇಕೆಂಬ ಬಯಕೆಯಿಂದ ಮಹೇಶ್ವರಿ ದಕ್ಷನ ಮಗಳಾಗಿ ಸತೀ ಎಂಬ ಹೆಸರಿನಿಂದ ಹುಟ್ಟಿದಳು. ಅವಳ ಬಯಕೆಯಂತೆಯೇ ಅವಳು ಶಿವನನ್ನೇ ಮದುವೆ ಮಾಡಿಕೊಂಡಳು. ಆ ವಿವಾಹ ಸಮಯದಲ್ಲಿ ಬ್ರಹ್ಮ, ವಿಷ್ಣು ಇಂದ್ರ ಮೊದಲಾದ ದೇವತೆಗಳೆಲ್ಲಾ ಬಂದು ಸತೀಶಿವರನ್ನು ಅನೇಕ ವಿಧವಾಗಿ ಸ್ತೋತ್ರ ಮಾಡಿದರು. ಬಂದವರನ್ನೆಲ್ಲಾ ಸ್ವಾಗತಿಸಿ ಗೌರವ ಮರ್ಯಾದೆ ಮಾಡಲು ನಂದೀಶ್ವರನನ್ನೂ, ಕಾಲಭೈರವನನ್ನೂ ನಿಯಮಿಸಿ, ಶಿವನು ಸತೀಸಮೇತನಾಗಿ ಕೈಲಾಸಕ್ಕೆ ಹೋಗಿ ಸುಖವಾಗಿರತೊಡಗಿದನು. ಬಂದವರೆಲ್ಲ ಕೈಲಾಸಾಭಿಮುಖವಾಗಿ ಶಿವನನ್ನು ಸ್ತೋತ್ರ ಮಾಡಿ ಹೋಗುತ್ತಿದ್ದರು.

ಹೀಗೆ ಕಾಲವು ಕಳೆಯುತ್ತಿರಲು, ಅನೇಕ ಮಂದಿ ಮಹಾ ಮಹಿಮರೆಲ್ಲಾ ಪ್ರಯಾಗ ನಗರದಲ್ಲಿ ಸೇರಿ, ದೊಡ್ಡದೊಂದು ಯಾಗ ಮಾಡಲು ನಿಶ್ಚಯಿಸಿದರು. ಆ ಯಾಗಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ, ಇಂದ್ರಾದಿ ದೇವತೆಗಳನ್ನೂ ಆಹ್ವಾನಮಾಡಿ, ಯಾಗವನ್ನು ಪ್ರಾರಂಭಮಾಡಿದರು.

ಮಹರ್ಷಿಗಳು ಯಜ್ಞ ಸಮಾರಂಭಕ್ಕೆ ಬಂದವರಿಗೆಲ್ಲಾ ಅವರವರಿಗೆ ತಕ್ಕ ವಸತಿಗಳನ್ನು ಏರ್ಪಡಿಸಿ, ಅರ್ಹತೆಗಳಿಗೆ ತಕ್ಕ ಆಸನಗಳನ್ನು ತೋರಿಸಿ ಕುಳ್ಳಿರಿಸಿದರು. ಎಲ್ಲರೂ ಕುಳಿತುಕೊಂಡು ಯಜ್ಞವನ್ನು ನೋಡುತ್ತಾ ಇದ್ದರು. ಆಗ ದಕ್ಷನು ತನ್ನ ಶಿಷ್ಯವೃಂದದೊಂದಿಗೆ ಅಲ್ಲಿಗೆ ಬಂದನು. ಸಭೆಯಲ್ಲಿ ಕುಳಿತವರೆಲ್ಲಾ ಎದ್ದು ನಿಂತು ದಕ್ಷನಿಗೆ ಮರ್ಯಾದೆ ತೋರಿಸಿ, ಇದಿರು ಹೋಗಿ ಕುಶಲ ವಿಚಾರಿಸಿ ಕರೆತಂದು ದಿವ್ಯಾಸನದಲ್ಲಿ ಕೂಡಿಸಿದರು. ದಕ್ಷನು ಸಭೆಯನ್ನೆಲ್ಲಾ ಒಮ್ಮೆ ಕಣ್ಣೋಡಿಸಿ ನೋಡಿದನು. ಬ್ರಹ್ಮ, ವಿಷ್ಣುಗಳಿಗೆ ನಮಸ್ಕಾರ ಮಾಡಿದನು. ತನ್ನ ಅಳಿಯನಾದ ಶಿವನು ತನ್ನ ಆಗಮನವನ್ನು ನೋಡಿ ಎದ್ದು ನಿಂತು ಮರ್ಯಾದೆ ತೋರಿಸಲಿಲ್ಲವೆಂಬುದನ್ನು ಗಮನಿಸಿ ದಕ್ಷನು ಸಭೆಯನ್ನು ನೋಡಿ



"ನೀವೆಲ್ಲರೂ ಎದ್ದು ನಿಂತು ನನ್ನನ್ನು ಗೌರವಿಸಿದ್ದೀರಿ. ಆ ಪರಮೇಶ್ವರನು ನನ್ನ ಅಳಿಯನಾದ ಕಾರಣದಿಂದ ಏಳದೆ, ನನ್ನನ್ನು ಮಾತಾಡಿಸದೆ ನಿರ್ಲಕ್ಷ್ಯಮಾಡಿದ್ದಾನೆ. ಅವನಿಗೆ ಚಿಕ್ಕವರು ದೊಡ್ಡವರು ಎಂಬ ತಾರತಮ್ಯವೇ ತಿಳಿಯದು. ಅಂತಹವನು ಇಲ್ಲಿರುವಾಗ ನಾನಿರುವುದು ಸರಿಯಲ್ಲ" ಎಂದು ಹೇಳಿ ತನ್ನ ಶಿಷ್ಯರನ್ನು ಕರೆದುಕೊಂಡು ಅಲ್ಲಿಂದ ಹೊರಟುಹೋಗ ತೊಡಗಿದನು.

ಅದನ್ನು ನೋಡಿ, ಬ್ರಹ್ಮ, ವಿಷ್ಣು ಮೊದಲಾದವರು ದಕ್ಷನಿಗೆ ಅಡ್ಡ ನಿಂತು ತಡೆದು, "ಅವನು ಈಶ್ವರನು, ಪರಮೇಶ್ವರನು. ಅವನನ್ನು ಈ ವಿಧವಾಗಿ ನಿಂದಿಸುವುದೂ ಅವಮಾನ ಪಡಿಸುವುದೂ ತಪ್ಪು" ಎಂದು ಹೇಳಿದರು.

ಆಗ ಉಕ್ಕುವ ಕೋಪವನ್ನು ತಾಳಲಾಗದೆ ನಂದೀಶ್ವರನು ದೊಡ್ಡ ಕಂಠದಿಂದ, "ಹೇ ದಕ್ಷಾ! ಶಿವದೂಷಣೆ ಮಾಡಿದ ನಿನ್ನ ಮುಖವಿರುವ ತಲೆ ಹಾರಿ ಹೋಗಿ ಹೋಮಕುಂಡದೊಳಗೆ ಬಿದ್ದು ನಾಶವಾಗಲಿ!" ಎಂದು ಶಪಿಸಿದನು.

ಅದನ್ನು ಕೇಳಿ ದಕ್ಷನು ರೇಗಿ, "ನಿನ್ನ ರುದ್ರಗಣಗಳೆಲ್ಲಾ ವೇದಬಾಹ್ಯರಾಗಿ, ಆಚಾರ ಹೀನರಾಗಿ, ಬೂದಿ ಬಳಿದುಕೊಂಡು, ಪಾಷಂಡರೆಂದು ಹೆಸರು ಪಡೆಯಲಿ!" ಎಂದು ಪ್ರತಿಶಾಪ ಕೊಟ್ಟನು. ಈ ಶಾಪ ಪ್ರತಿ ಶಾಪಗಳು ಈಗ ನಡೆಯದೆ, ಈ ಯಜ್ಞವು ಶುಭಸಾಂಗವಾಗಲೆಂದು ಬ್ರಹ್ಮ ವಿಷ್ಣುಗಳು ಪ್ರಾರ್ಥಿಸಿಕೊಂಡರು.

ಯಜ್ಞವು ಪೂರ್ತಿಯಾಗುವವರೆಗೂ ಶಿವನು ಅಲ್ಲಿದ್ದು, ತನ್ನ ರುದ್ರಗಣಗಳನ್ನು ಕರೆದುಕೊಂಡು ಕೈಲಾಸಕ್ಕೆ ಹೊರಟುಹೋದನು.

ಮತ್ತೊಂದು ದಿನ ದಕ್ಷನು ತನ್ನ ಶಿಷ್ಯರಾದ ಭೃಗು ಮೊದಲಾದ ಋಷಿಗಳನ್ನು ಕರೆದು ತನ್ನ ಆಶ್ರಮದಲ್ಲಿ ವಾಜಪೇಯವೆಂಬ ಯಜ್ಞ ಮಾಡಲು ಪ್ರಾರಂಭಿಸಿದನು. ಅವನಿಗೆ ಶಿವನ ಮೇಲೆ ಬಹಳ ಕೋಪವಿದ್ದಿತು. ಆದುದರಿಂದ ವಾಜಪೇಯ ಯಜ್ಞದಲ್ಲಿ ಶಿವನಿಗೆ ಹವಿರ್ಭಾಗವಿಲ್ಲದಂತೆ ಮಾಡಿದನು.

ಹಾಗೆ ಆ ಯಜ್ಞ ಮಾಡಿ ಮುಗಿಸಿದ ಮೇಲೆಯೂ ದಕ್ಷನಿಗೆ ಶಿವನ ಮೇಲಿನ ಕೋಪ ತಣಿಯಲಿಲ್ಲ. ಆದುದರಿಂದ ಅವನು "ಬೃಹಸ್ಪತಿ ಯಜ್ಞ" ಎಂಬೊಂದು ಮಹಾ ಯಜ್ಞ ಮಾಡಲು ಪ್ರಾರಂಭಿಸಿ, ಅದಕ್ಕೆ ಎಲ್ಲಾ ದೇವತೆಗಳನ್ನೂ, ಮಹರ್ಷಿಗಳನ್ನೂ, ಪಿತೃಗಣಗಳನ್ನೂ, ಅಪ್ಸರಸಿಯರನ್ನೂ, ವಿಶ್ವೇದೇವತೆಗಳನ್ನೂ, ಮರುತ್ತುಗಳನ್ನೂ, ಗಂಧರ್ವ, ಸಿದ್ಧ, ವಿದ್ಯಾಧರ, ಕಿನ್ನರ, ಯಕ್ಷರನ್ನೂ, ಕಶ್ಯಪ, ಆಗಸ್ತ್ಯ, ಅತ್ರಿ, ಭೃಗು, ಮರೀಚಿ, ನಾರದ, ಪರಾಶರಾದಿ ಮಹರ್ಷಿಗಳನ್ನೂ ಆಹ್ವಾನಿಸಿದಂತೆ ಅವರೆಲ್ಲರೂ ಬಂದರು.

ಬ್ರಹ್ಮ, ವಿಷ್ಣುಗಳ ಹೊರತು ಉಳಿದವರೆಲ್ಲಾ ದಕ್ಷನಿಗೆ ಹೆದರಿಯೇ ಬಂದಿದ್ದರು. ದಕ್ಷನು ಶಿವನನ್ನು



ಆಹ್ವಾನಿಸುವುದಿಲ್ಲವೆಂದು ಬ್ರಹ್ಮ ವಿಷ್ಣುಗಳಿಗೆ ಗೊತ್ತಾಗಿತ್ತು. ಯಜ್ಞಕ್ಕೆ ಬಂದವರನ್ನು ಸತ್ಕರಿಸಲು ದಕ್ಷನ ಶಿಷ್ಯರೂ. ವಸತಿಗಳನ್ನು ಏರ್ಪಡಿಸಲು ವಿಶ್ವಕರ್ಮನೂ ನಿಯೋಜಿಸಲ್ಪಟ್ಟಿದ್ದರು.

ದಕ್ಷನು ಯಜ್ಞದೀಕ್ಷೆ ವಹಿಸಿ ಪತ್ನಿಸಮೇತನಾಗಿ ಯಾಗಶಾಲೆಯನ್ನು ಪ್ರವೇಶಿಸಿ ಸಭಾವಂದನೆ ಮಾಡಿದನು. ಕರೆಯದೇ ಇದ್ದುದರಿಂದ ಶಿವನು ಆ ಸಭೆಯಲ್ಲಿ ಇರಲಿಲ್ಲ. ಬ್ರಹ್ಮ ವಿಷ್ಣುಗಳು ಕರೆದರೂ ಬಂದಿರಲಿಲ್ಲ. ಅನೇಕ ಮಂದಿ ದೇವತೆಗಳೊಂದಿಗೆ, ಮಹರ್ಷಿಗಳೊಂದಿಗೆ ತುಂಬಿರುವ ಆ ಮಹಾ ಸಭೆಯಲ್ಲಿ ಶಿವಭಕ್ತರಾದ ಮರೀಚಿ, ದಧೀಚಿ, ಭೃಗು ಮೊದಲಾದ ಮಹರ್ಷಿಗಳು ಸಭೆಯನ್ನೆಲ್ಲಾ ಒಮ್ಮೆ ನೋಡಿ, ದಕ್ಷನನ್ನು ಕುರಿತು, "ಓ ದಕ್ಷಾ, ಈ ಸಭೆಗೆ ಸತೀದೇವಿಯನ್ನೂ, ಶಿವನನ್ನೂ ಕರೆಯಲಿಲ್ಲವೇ? ಅವರು ಇಲ್ಲಿ ಕಾಣುವುದಿಲ್ಲವೇಕೆ?" ಎಂದು ಕೇಳಿದರು.

ಅದಕ್ಕೆ ದಕ್ಷನು, "ಶಿವನು ಕರ್ಮ ಭ್ರಷ್ಟನು. ಆದುದರಿಂದ ಅವನನ್ನು ಕರೆಯಲಿಲ್ಲ. ಅವನು ಅಪವಿತ್ರನು, ಕಪಾಲಧಾರಿ, ಸ್ಮಶಾನವಾಸಿ. ಪ್ರೇತ ಗಣಗಳಿಗೆ ನಾಯಕ. ಅಂಥವನು ಈ ಯಜ್ಞಕ್ಕೆ ಬರಲು ಅರ್ಹನಲ್ಲ" ಎಂದನು.

ಈ ಶಿವದೂಷಣೆಯನ್ನು ಕೇಳಿ ದಧೀಚಿ "ಎಲೋ ದಕ್ಷಾ, ಈ ಯಾಗವು ನೆರವೇರಲಾರದು. ಶಿವನನ್ನು ಕರೆಯದೆ ಈ ಯಾಗ ಕಾರ್ಯಕ್ಕೆ ತಲೆ ಹಾಕಿದ ನೀನು ಅಪತ್ತನ್ನೂ, ವಿನಾಶವನ್ನೂ ತಂದುಕೊಳ್ಳುತ್ತಿರುವಿ. ಈ ಯಾಗಕ್ಕೆ ಬಂದವರು ಕೂಡಾ ಕಡೆಗೆ ದುಃಖಭಾಜನರಾಗುತ್ತಾರೆ" ಎಂದನು. ಅದು ನಿಜವೆಂದು ಹೇಳಿ ವಾಮದೇವ, ಮರೀಚಿ, ಗೌತಮ, ಶಿಲಾದ ಮೊದಲಾದ ಅನೇಕ ಮುನಿ ಋಷಿಗಳೊಂದಿಗೆ ದಧೀಚಿಯೂ ಸಭೆಯಿಂದ ಹೊರಟುಹೋದನು.

ಹಾಗೆ ಹೊರಟುಹೋಗುವವರನ್ನು ನೋಡಿ ದಕ್ಷನು, ಸಭೆಯಲ್ಲಿರುವವರೊಂದಿಗೆ, "ಹೋಗುವವರೆಲ್ಲ ಸದಾಚಾರವಿಲ್ಲದ ಪಾಷಂಡರು. ಅಂಥವರು ಹೊರಟುಹೋಗುವುದೇ ಒಳ್ಳೇದು. ಅದಕ್ಕಾಗಿ ನೀವೇನೂ ಚಿಂತಿಸದೆ, ನನ್ನ ಯಜ್ಞವನ್ನು ಪೂರ್ತಿಗೊಳಿಸಿಕೊಡಿರಿ" ಎಂದನು.

ಇಷ್ಟರೊಳಗೆ ಕೈಲಾಸದಲ್ಲಿ ಒಂದು ಸಂಗತಿ ನಡೆದುಕೊಂಡಿದ್ದಿತು. ಶಿವನೊಂದಿಗೆ ಸುಖವಾಗಿ ಸಂಸಾರ ಸಾಗಿಸಿಕೊಂಡಿದ್ದ ಸತೀದೇವಿ ಒಂದು ದಿನ ತನ್ನ ಗೆಳತಿಯರೊಂದಿಗೆ ಉದ್ಯಾನದಲ್ಲಿ ವಿಹರಿಸುತ್ತಿರುವಾಗ. ಆಕಾಶದಲ್ಲಿ ಅನೇಕ ವಿಮಾನಗಳು ಹೋಗುತ್ತಿರುವುದನ್ನು ನೋಡಿದಳು. ಆ ವಿಮಾನಗಳು ಎಲ್ಲಿಗೆ ಹೋಗುತ್ತವೆಂದು ತಿಳಿಯಲು ಸತೀದೇವಿ ತನ್ನ ಗೆಳತಿಯರನ್ನು ಕಳುಹಿಸಿದಳು. ಅವರು ತಿರುಗಿ ಬಂದು. ದಕ್ಷನು ಮಾಡುವ ಮಹಾ ಯಜ್ಞಸಮಾರಂಭಕ್ಕೆ ಅವರೆಲ್ಲಾ ಹೋಗುತ್ತಿರುವ ಸಮಾಚಾರವನ್ನು ಹೇಳಿದರು.

ಅದನ್ನು ಕೇಳಿ ಸತೀದೇವಿಗೆ ತಾನು ಕೂಡಾ ತನ್ನ ತಂದೆ ಮಾಡುವ ಯಜ್ಞ ಸಮಾರಂಭಕ್ಕೆ ಗಂಡನೊಂದಿಗೆ ಕೂಡಿ ಹೋಗಬೇಕೆಂಬ ಆಸೆ ಉಂಟಾಯಿತು.

ಅವಳು ಬೇಗ ಬೇಗನೇ ಶಿವನ ಬಳಿಗೆ ಹೋಗಿ, "ನನ್ನ ತಂದೆ ದೊಡ್ಡ ರೀತಿಯಲ್ಲಿ ಯಜ್ಞಮಾಡುತ್ತಿದ್ದಾರಂತೆ, ದೇವತೆಗಳೆಲ್ಲಾ ಅಲ್ಲಿಗೆ ಹೋಗುತ್ತಿದ್ದಾರೆ. ನಾವು ಕೂಡಾ ನಮ್ಮ ರುದ್ರಗಣಗಳೊಂದಿಗೆ ಕೂಡಿ ಅಲ್ಲಿಗೆ ಹೋಗೋಣ, ಹೊರಡಿ" ಎಂದಳು.

ಅದನ್ನು ಕೇಳಿ ಶಿವನು, "ಸತೀ, ನಿನ್ನ ತಂದೆಗೆ ನಮ್ಮ ಮೇಲೆ ದ್ವೇಷವೆಂದು ನಿನಗೆ ಗೊತ್ತಿಲ್ಲವೆ? ಆದುದರಿಂದಲೇ ಆಹ್ವಾನ ಕಳಿಸಲಿಲ್ಲ. ನಮ್ಮನ್ನು ಕರೆಯದೆಯೇ ಯಜ್ಞ ಮಾಡುತ್ತಿದ್ದಾನೆ. ಕರೆಯದ ಮುತ್ತ್ಯದೆತನಕ್ಕೆ ಹೋಗಲೇಬಾರದು. ಹಾಗೆ ಹೋದರೆ ನಮಗೆ ಅವಮಾನವೇ ನಡೆಯುತ್ತದೆ. ಆಮೇಲೆ ಬೇಡದ ಆಪದಗಳೂ ಬರುತ್ತವೆ. ಸುಮ್ಮನಿರು" ಎಂದನು ಶಿವ.

"ಹಾಗಿದ್ದರೆ ನೀವು ಬರಬೇಡಿ. ನಾನು ಒಬ್ಬಳೇ ಹೋಗುತ್ತೇನೆ. ನನ್ನವರು ನನ್ನನ್ನೇಕೆ ಅವಮಾನಿಸುತ್ತಾರೆ? ಹಾಗೂ ನನ್ನ ತಂದೆ ಏನಾದರೂ ಹೇಳಿದರೆ ನಾನು ತಕ್ಕ ಸಮಾಧಾನ ಹೇಳಿ ನಿಮಗೂ ಕರೆ ಕಳುಹಿಸುವ ಹಾಗೆ ಮಾಡುತ್ತೇನೆ. ನಂದೀಶ್ವರ ಮೊದಲಾದವರ ಸಹಾಯ ಕೊಟ್ಟು ನನ್ನನ್ನು ಕಳುಹಿಸಿ ಕೊಡಿರಿ." ಎಂದಳು ಸತೀದೇವಿ.

"ಸತೀದೇವೀ! ನಿನ್ನನ್ನು ಬಿಟ್ಟು ನಾನು ಕ್ಷಣ ಕಾಲವೂ ಇರಲಾರೆ, ನೀನು ನನ್ನನ್ನು ಬಿಟ್ಟು ನಿನ್ನ ತಂದೆ ಮಾಡುವ ಯಜ್ಞಕ್ಕೆ ಹೋಗಬೇಕೆಂದು ಹಟ ಹಿಡಿಯುವಿ. ಹೋದರೆ ನಿನಗೆ ತಪ್ಪದೆ ಅವಮಾನವಾಗುತ್ತದೆ. ದೊಡ್ಡ ಅಪಾಯ ಬರುತ್ತದೆ. ಬರಲಿರುವುದನ್ನು ಸ್ವಲ್ಪ ಆಲೋಚಿಸು." ಎಂದು ಶಿವನು ಸತೀದೇವಿಗೆ ಹೇಳಿದನು.

ಆದರೆ ಸತೀದೇವಿ ಶಿವನ ಮಾತಿನೊಳಗಿರುವ ನಿಜವನ್ನು ತಿಳಿಯಲಾಗದೆ ಹೋದಳು. ತನ್ನ ತಾಯಿ ತಂದೆಯರು ತನ್ನನ್ನು ಅವಮಾನಿಸುವರೆಂದು ಊಹಿಸಲಿಕ್ಕೂ ಅವಳಿಂದಾಗಲಿಲ್ಲ. ತಾಯಿಯನ್ನೂ ಸಹೋದರಿಯರನ್ನೂ ನೋಡಬೇಕೆಂಬ ಕುತೂಹಲದಲ್ಲಿ ಅವಳ ಆಲೋಚನೆ ಮುಚ್ಚಿಹೋಯಿತು. ಅವಳು ತೌರುಮನೆಗೆ ಹೋಗಲೇಬೇಕೆಂದು ಹಟ ಹಿಡಿದಳು.

ಹೇಗೆ ನಡೆಯಬೇಕೆಂದಿದೆಯೋ ಹಾಗೆಯೇ ನಡೆಯುತ್ತದೆಂದುಕೊಂಡು ಶಿವನು, ನಂದೀಶ್ವರನನ್ನೂ ರುದ್ರಗಣಗಳನ್ನೂ ಅವಳಿಗೆ ಸಹಾಯವಾಗಿ ಕೊಟ್ಟು, ಅವಳನ್ನು ದಕ್ಷಯಜ್ಞಕ್ಕೆ ಹೋಗಲು ಕಳುಹಿಸಿಕೊಟ್ಟನು.






ಶಿವನಿಗೆ ಇಷ್ಟವಿಲ್ಲದಿದ್ದರೂ ತನ್ನ ತಂದೆಯನ್ನು ಹೇಗಾದರೂ ಮಾಡಿ ಶಿವನ ಮೇಲೆ ಗೌರವಾದರ ಹುಟ್ಟುವಂತೆ ಮಾಡಬಲ್ಲೆನೆಂಬ ಆತ್ಮ ವಿಶ್ವಾಸ ದಿಂದ ಸತೀದೇವಿ, ನಂದೀಶ್ವರನನ್ನು ತನ್ನೊಂದಿಗೆ ಕರೆದುಕೊಂಡು ದಕ್ಷನ ಯಜ್ಞ ಶಾಲೆಯ ಬಳಿಗೆ ಬಂದಳು.

ಆಗ ಅವಳ ತಾಯಿ ಪ್ರಸೂತಿಯೂ, ಸಹೋದರರೂ ಇದಿರಾಗಿ ಸತಿಯ ಹತ್ತಿರ ಬಂದು ಕುಶಲ ಪ್ರಶ್ನೆ ಮಾಡಿದರು. ಸತೀದೇವಿಯೊಂದಿಗೆ ತಾಯಿ ಪ್ರಸೂತಿ ರಹಸ್ಯವಾಗಿ, "ನಿನ್ನ ತಂದೆಗೆ ವೃದ್ಧಾಪ್ಯದ ಭ್ರಾಂತಿ ಬಂದುಬಿಟ್ಟಿತು. ಅವರು ನಿನ್ನ ಪತಿಯನ್ನು ನಿಂದಿಸಿಕೊಂಡೇ ಇದ್ದಾರೆ. ನೀನು ಅವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಸುಮ್ಮನಿರಬೇಕು, ತಿಳಿಯಿತೇ?" ಎಂದು ಹೇಳಿ, ಅವಳನ್ನು ಮೆಲ್ಲನೆ ಯಜ್ಞಶಾಲೆಯೊಳಗೆ ಕರೆದುಕೊಂಡು ಹೋದಳು.

ಮಗಳನ್ನು ನೋಡಿದ ಕೂಡಲೇ ದಕ್ಷನಲ್ಲಿ ಶಿವನ ಮೇಲಿನ ಕೋಪವು ಭಗ್ಗನೆ ಉರಿಯಿತು. ಅವನು ಮಗಳನ್ನು ನೋಡಿ, "ಏಕೆ ಬಂದೆ? ಯಾರು ಕರೆದರು? ನಿನ್ನ ಗಂಡ ಸ್ಮಶಾನವಾಸಿ. ಪಿಶಾಚಿಗಳನ್ನು ಆಳುವವನು. ಕಪಾಲಗಳನ್ನು ಧರಿಸುವವನು. ಹೀಗೆ ಅಪವಿತ್ರನಾಗಿರುವವನು ಪವಿತ್ರವಾದ ಯಜ್ಞಯಾಗಗಳಿಗೆ ಬರಲು ಅರ್ಹನಲ್ಲ. ಅದಕ್ಕೇ ಅವನನ್ನು ಕರೆಯಲಿಲ್ಲ. ಅವನಿಗೆ ಯಾಗದಲ್ಲಿ ಭಾಗ ಕೊಡಲೂ ಸಾಧ್ಯವಿಲ್ಲ. ಕೊಡುವುದೂ ತಪ್ಪೇ. ಅವನ ಹೆಂಡತಿಯಾಗಿರುವ ನೀನೂ ಅಪವಿತ್ರಳಾಗಿರುವಿ. ನಿನ್ನ ಗಂಡನನ್ನು ನಾನು ಕರೆಯದಿರುವಾಗ ನೀನು ಅಧಿಕಪ್ರಸಂಗದಿಂದ ಏಕೆ ಬಂದೆ? ಯಜ್ಞವನ್ನು ಅಪವಿತ್ರ ಮಾಡಬೇಕೆಂದು ಬಂದೆಯಾ?" ಎಂದನು.

ಆ ಮಾತುಗಳನ್ನು ಕೇಳಿ ಸತೀದೇವಿ ತಂದೆಯೊಂದಿಗೆ, "ಯಜ್ಞಕರ್ತನಾದ ಶಿವನನ್ನು ಬಿಟ್ಟು, ಹವಿರ್ಭಾಗ ಕೊಡದೆ ಯಜ್ಞಮಾಡುವುದುಂಟೆ? ಅದರ ಮೇಲೆ ಆತನನ್ನು ದೂಷಿಸುವೆ! ಈಗಾದರೂ ಸಮಯ ಮೀರಿಲ್ಲ. ಆತನನ್ನು ಕರೆಯಿಸು. ಯಜ್ಞ ಭಾಗವನ್ನು ಕೊಟ್ಟು ಗೌರವಿಸು. ಇಲ್ಲದಿದ್ದರೆ ಅಪ್ಪಾ,

## ೬. ವೀರಭದ್ರ ವಿಜಯ



ನಿನ್ನ ಯಜ್ಞವು ಪೂರ್ತಿಯಾಗುವಂತಿಲ್ಲ. ನೀನೂ ನಾಶವಾಗುವಿ!" ಎಂದಳು.

ಸಭೆಯಲ್ಲಿದ್ದ ಭೃಗು ಮೊದಲಾದವರು ಸತೀ ದೇವಿ ಹೇಳಿದ ಹಾಗೆ ಮಾಡುವುದೇ ಯುಕ್ತವೆಂದು, ಅವಳು ಹೇಳಿದುದು ನಿಜವೆಂದು ದಕ್ಷನಿಗೆ ಹಿತ ವಚನ ಹೇಳಿದರು.

ಆಗ ದಕ್ಷನು ಮತ್ತಿಷ್ಟು ಕೋಪದಿಂದ, "ಎಲೇ ಸತೀ! ನಿನ್ನ ಮುಖವನ್ನು ನೋಡಿದರೇನೇ ಪಾಪ ಬರುತ್ತದೆ, ನೀನು ಯಜ್ಞಶಾಲೆಯಿಂದ ತತ್‌ಕ್ಷಣ ಹೊರಟು ಹೋಗುವಿಯಾ, ಬಲವಂತದಿಂದ ದೂಡಿಸಿಕೊಳ್ಳುವಿಯಾ?" ಎಂದು ಕೂಗಿದನು ದಕ್ಷ.

ಸತೀದೇವಿಯ ಹೃದಯವು ಉರಿಯ ತೊಡಗಿತು. ಗಂಡನ ಮಾತನ್ನು ಕೇಳದೆ ಬಂದುದು ದೊಡ್ಡ ತಪ್ಪಾಯಿತೆಂದು ಅವಳಿಗೆ ಈಗ ಗೊತ್ತಾಯಿತು. ಈ ಅವಮಾನವನ್ನು ಹೊತ್ತುಕೊಂಡು ಪತಿಯ ಬಳಿಗೆ ಯಾವ ಮುಖದಿಂದ ಹೋಗಲಿ? ಇಂಥಾ ಜನ್ಮ ಇನ್ನು ಸಾಕು. ಇವನಿಗೆ ಮಗಳಾದ ನಾನು ಇಲ್ಲಿಯೇ ದಗ್ಧಳಾಗುತ್ತೇನೆ. ಮುಂದಿನ ಜನ್ಮದಲ್ಲಿ ಶಿವನೇ ಗಂಡನಾಗಲಿ!" ಎಂದು ಯೋಗಶಕ್ತಿಯಿಂದ ಅಗ್ನಿಯನ್ನು ಹುಟ್ಟಿಸಿ, ಅದರಲ್ಲಿ ತನ್ನ ಪಂಚ ಪ್ರಾಣಗಳನ್ನೂ ಆಹುತಿ ಮಾಡಿ ಬಿದ್ದುಬಿಟ್ಟಳು.

ಸತೀದೇವಿ ಸತ್ತು ಬಿದ್ದುದನ್ನು ನೋಡಿ ನಂದೀಶ್ವರ ಮೊದಲಾದವರು ಹಾಹಾಕಾರಮಾಡುತ್ತ, ಯಜ್ಞ ಶಾಲೆಯೊಳಗೆ ಪ್ರವೇಶಿಸಲು ಧಾವಿಸಿದರು. ದಕ್ಷನ ಅಪ್ಪಣೆಯಂತೆ ಭೃಗುಮಹರ್ಷಿ ಅಭಿಚಾರ ಹೋಮ ಮಾಡಿ ನಂದೀಶ್ವರಾದಿಗಳನ್ನೆಲ್ಲ ಅಲ್ಲಿಂದ ಓಡಿಸಿಬಿಟ್ಟನು.

ಇಷ್ಟರೊಳಗೆ ನಾರದನೇ ಮೊದಲಾದ ಕೆಲವರು ಕೈಲಾಸಕ್ಕೆ ಹೋಗಿ ಶಿವನೊಂದಿಗೆ ನಡೆದ ಸಂಗತಿ ಯನ್ನೆಲ್ಲಾ ಹೇಳಿದರು. ಅದನ್ನು ಕೇಳುತ್ತಿದ್ದ ಶಿವನಿಗೆ ರುದ್ರಾವೇಶವೇ ಬಂದುಬಿಟ್ಟಿತು. ಅಷ್ಟರಲ್ಲಿ ನಂದೀಶ್ವರ ಮುಂತಾದವರೂ ಓಡೋಡಿ ಬಂದರು. ಶಿವನು ಕ್ರೋಧದಿಂದ ಹುಂಕರಿಸುತ್ತ, ತನ್ನದೊಂದು ಜಟೆಯನ್ನು ಕಿತ್ತು ಪರ್ವತದ ಮೇಲೆ ಅಪ್ಪಳಿಸಿ ಹೊಡೆದನು. ಆಗ ಆ ಜಟೆಯಿಂದ ಭದ್ರಕಾಳಿಯೂ ವೀರಭದ್ರನೂ ಹುಟ್ಟಿದರು. ವೀರಭದ್ರನು ಸಾವಿರ ಕೈಗಳಿಂದ, ಉದ್ದವಾದ ಕೋರೆಗಳಿಂದ, ಕೋಟಿ ಸೂರ್ಯರ ಕಾಂತಿಯಿಂದ ಮಹಾ ರೌದ್ರಾಕಾರದ ಮೂರ್ತಿಯಂತೆ ಕಂಡನು. ಅವನು ಶಿವನಿಗೆ ನಮಸ್ಕಾರ ಮಾಡಿ, "ತಂದೆಯೇ! ಏನು ನಿಮ್ಮ ಆಜ್ಞೆ?" ಎಂದನು.

"ಕಂದಾ! ವೀರಭದ್ರಾ! ನೀನೂ ಭದ್ರಕಾಳಿಯೂ ನಮ್ಮ ಗಣಗಳೊಂದಿಗೆ ದಕ್ಷನ ಯಜ್ಞಶಾಲೆಗೆ ಹೋಗಿ, ಅವನ ಯಜ್ಞವನ್ನು ಧ್ವಂಸ ಮಾಡಿರಿ. ಅದರಲ್ಲಿ ಭಾಗವಹಿಸಿದವರನ್ನೆಲ್ಲಾ ದಂಡಿಸಿರಿ!" ಎಂದನು ಶಿವ.

ವೀರಭದ್ರನು ಸಿಂಹಗಳನ್ನು ಹೂಡಿದ ರಥದ ಮೇಲೆ ಏರಿಕೊಂಡು, ನಂದೀಶ್ವರ, ಚಂಡೀಶ್ವರ,

ಭೈರವ ಮೊದಲಾದ ಗಣಗಳನ್ನು ತನ್ನೊಂದಿಗೆ ಕರೆದುಕೊಂಡು ಹೊರಟನು. ಭದ್ರಕಾಳಿ ಸಿಂಹದ ಮೇಲೆ ಏರಿಕೊಂಡು ಮಹಾಕಾಳಿ, ಗೌರಿ, ಕಾತ್ಯಾಯಿನಿ, ಚಾಮುಂಡಾ ಮೊದಲಾದ ಮಹಾ ಶಕ್ತಿ ಗಣಗಳನ್ನು ತನ್ನೊಂದಿಗೆ ಕರೆದುಕೊಂಡು ಹೊರಟಳು.

ಅಲ್ಲಿ ದಕ್ಷನು ಯಾಗ ಮಾಡುವ ಸ್ಥಳದಲ್ಲಿ ಕೆಲವು ಉತ್ಪಾತಗಳು ಆಗತೊಡಗಿದುವು. ಉಲ್ಕೆಗಳು ಉದುರಿದುವು. ರಕ್ತದ ಮಳೆ ಸುರಿಯಿತು. ಆಕಾಶ ದಿಂದ ಹಾವುಗಳೂ, ಚೇಳುಗಳೂ, ಕ್ರಿಮಿಕೀಟಗಳೂ, ಬಿದ್ದುವು. ಯಾಗಶಾಲೆಯಲ್ಲಿದ್ದ ಕೆಲವರು ದಕ್ಷನನ್ನು ನಿಂದಿಸಲು ತೊಡಗಿದರು. ಮತ್ತೆ ಕೆಲವರು ಜೀವ ಭಯದಿಂದ ಓಡಿ ಹೋಗಲಾರಂಭಿಸಿದರು.

ಇಷ್ಟರೊಳಗೆ ವೀರಭದ್ರ, ಭದ್ರಕಾಳಿಯರು ಗಣ ಗಢಣಗಳೊಂದಿಗೆ ಧಿಮಿಧಿಮಿಸಿಕೊಂಡು ಯಾಗ ಶಾಲೆಯನ್ನು ಮುತ್ತಿಗೆ ಹಾಕಿ ಹೊರಗೆ ಬರುವವ ರನ್ನು ಬಾಧಿಸಲು ತೊಡಗಿದರು. ವೀರಭದ್ರನು ತನ್ನ ಪ್ರಮುಖ ಅನುಚರರೊಂದಿಗೆ ಯಾಗಶಾಲೆ ಯೊಳಗೆ ಪ್ರವೇಶಿಸಿದನು. ಅವರೆಲ್ಲಾ ಒಳಗಿದ್ದ ದೇವತೆಗಳನ್ನೂ ಋಷಿಗಳನ್ನೂ ಹಿಡಿದೆಳೆದು ಸಿಕ್ಕ ಸಿಕ್ಕ ಹಾಗೆ ಹೊಡೆಯತೊಡಗಿದರು. ದಕ್ಷನನ್ನು ನೋಡಿದ ಕೂಡಲೇ ವೀರಭದ್ರನಿಗೆ ತಂದೆಯಾದ ಶಿವನ ದುಃಖ ಸಂತಾಪಗಳು ನೆನಪಿಗೆ ಬಂದುವು. ಮಹಾ ರೌದ್ರತೆಯಿಂದ ದಕ್ಷನ ಮೇಲೆ ಹಾರಿ ಹಿಡಿದು ಅವನ ತಲೆಯನ್ನು ತಿರುಚಿ ಕಿತ್ತು ತೆಗೆದು ಹೋಮಕುಂಡದಲ್ಲಿ ಹಾಕಿದನು.

ಅನಂತರ ವೀರಭದ್ರನು ಋತ್ವಿಕ್ಕುಗಳನ್ನೂ, ದೇವತೆಗಳನ್ನೂ, ಯಾಗಶಾಲೆಯಲ್ಲಿದ್ದ ಉಳಿದವ ರನ್ನೂ ನೋಡಿ, "ಈಶ್ವರ ದ್ರೋಹಿಯಾದ ದಕ್ಷನಿಗೆ ಬಂದ ಗತಿಯನ್ನು ನೋಡಿಯೂ ಇಲ್ಲೇ ಇರುವಿರಾ? ಅವನ ಯಾಗಕ್ಕೆ ಬಂದುದಕ್ಕೆ ತಕ್ಕ ಫಲವನ್ನು ಅನು



ಭವಿಸಬೇಕೆಂದಿರುವಿರಾ?" ಎಂದು ಕೆಣಕಿಕೊಂಡು ಅವರ ಮೇಲೆ ಬಿದ್ದು ಹಿಂಸಿಸಲಾರಂಭಿಸಿದನು.

ಆಗ ದಕ್ಷನ ಹೆಂಡತಿಯಾದ ಪ್ರಸೂತಿಯೂ, ಇತರ ಸ್ತ್ರೀಯರೂ ಬಂದು ಪ್ರಾರ್ಥಿಸಿ ವೀರಭದ್ರ ನನ್ನೂ, ಅವನ ಗಣಗಳನ್ನೂ ಶಾಂತಪಡಿಸಿದರು. ಆಮೇಲೆ ಭದ್ರಕಾಳಿಯೂ ವೀರಭದ್ರನೂ ತಮ್ಮ ಗಣ ಸೈನ್ಯಗಳೊಂದಿಗೆ ಕೈಲಾಸ ಪರ್ವತಕ್ಕೆ ಹೋಗಿ ಶಿವನಿಗೆ ನಮಸ್ಕಾರ ಮಾಡಿ ನಡೆದ ಸಂಗತಿಯನ್ನು ಹೇಳಿದರು.

ಅತ್ತ ವೀರಭದ್ರ, ಭದ್ರಕಾಳಿಯರ ಪ್ರತಾಪಗಳಿಂದ ಭಗ್ನರಾದ ದೇವತೆಗಳೂ, ಋಷಿಗಳೂ ಬ್ರಹ್ಮನ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿ ದರು. ಬ್ರಹ್ಮನು ಅವರನ್ನೆಲ್ಲಾ ಕರೆದುಕೊಂಡು ವೈಕುಂಠಕ್ಕೆ ಹೋಗಿ ಮಹಾ ವಿಷ್ಣುವಿನೊಂದಿಗೆ, ಶಿವನ ಕೋಪದಿಂದ ಹುಟ್ಟಿದ ವೀರಭದ್ರ, ಭದ್ರ ಕಾಳಿಯರಿಂದಾದ ಅನಾಹುತಗಳನ್ನು ಹೇಳಿದನು.



ಹೇಗೇನಾದರೂ ಆಗುವುದೆಂದು ತನಗೆ ಮೊದಲೇ ಗೊತ್ತಿದ್ದುದರಿಂದ ತಾನು ಅಲ್ಲಿಗೆ ಹೋಗಲಿಲ್ಲವೆಂದು ಹೇಳಿ ವಿಷ್ಣು, ಅವರೆಲ್ಲರನ್ನೂ ಕರೆದುಕೊಂಡು ಕೈಲಾಸಕ್ಕೆ ಹೊರಟನು.

ಆ ಸಮಯದಲ್ಲಿ ಶಿವನು ಧ್ಯಾನ ಸಮಾಧಿಯಲ್ಲಿ ಮುಳುಗಿದ್ದನು. ಅವನ ಸುತ್ತಲೂ ವೀರಭದ್ರ ಮೊದಲಾದ ಗಣಗಳೆಲ್ಲರೂ ಕೂಡಿಕೊಂಡಿದ್ದರು. ಮುಂದೇನು ಮಾಡಬೇಕೆಂಬ ಪ್ರಶ್ನೆ ಅವರನ್ನೆಲ್ಲಾ ಕವಿದ ಹಾಗೆ ಕಾಣುತ್ತಿತ್ತು.

ವಿಷ್ಣು, ಬ್ರಹ್ಮ ಮೊದಲಾದವರೆಲ್ಲಾ ಬಂದಿರುವುದನ್ನು ತಿಳಿದು ಶಿವನು ಕಣ್ಣು ತೆರೆದು ನೋಡಿ, ಎಲ್ಲರನ್ನೂ ಕುಳಿತುಕೊಳ್ಳುವಂತೆ ಹೇಳಿದನು.

ವಿಷ್ಣು ಶಿವನನ್ನು ನೋಡಿ, "ಸದಾಶಿವಾ, ಕೋಪವನ್ನೂ, ಚಿಂತೆಯನ್ನೂ ಬಿಟ್ಟು, ಪ್ರಕೃತಿ ಮಾಯೆಯಿಂದ ಹೊರಬಿದ್ದು, ನಮ್ಮ ಕರ್ತವ್ಯವನ್ನು ಕುರಿತು ಆಲೋಚಿಸಬೇಕಾದ ಸಮಯವಿದು. ನಿನ್ನನ್ನು ದ್ವೇಷಿಸಿಕೊಂಡಿದ್ದ ದಕ್ಷನು ತಕ್ಕ ಫಲವನ್ನು ಅನುಭವಿಸಿದನು. ಆದರೆ ದಕ್ಷನು ಪ್ರಾರಂಭಿಸಿದ ಯಾಗವು ಪೂರ್ತಿಯಾಗದಿದ್ದರೆ, ಪ್ರಪಂಚಕ್ಕೆ ಅನಾವೃಷ್ಟಿಯುಂಟಾಗಿ ಪ್ರಾಣಿಕೋಟಿಗಳು ನಶಿಸುತ್ತವೆ. ಆದುದರಿಂದ ನೀನು ದಕ್ಷನನ್ನು ಬದುಕಿಸಿ, ಅವನ ಯಾಗವನ್ನು ಅವನಿಂದಲೇ ಪೂರ್ತಿಗೊಳಿಸಬೇಕಾಗಿದೆ. ದಯೆದೋರು ಸದಾಶಿವಾ!" ಎಂದನು.

ಶಿವನು ಅದಕ್ಕೆ ಅಂಗೀಕಾರ ಸೂಚಿಸಿ, "ಸರಿ, ನಾವೆಲ್ಲರೂ ಅಲ್ಲಿಗೆ ಹೋಗೋಣ. ದಕ್ಷ ಯಾಗವು ಸುಗಮವಾಗಿ ಮುಗಿಯುವಂತೆ ಮಾಡಿ ಲೋಕವನ್ನು ಕಾಪಾಡೋಣ" ಎಂದನು.

ಎಲ್ಲರೂ ಭಗ್ನವಾದ ಯಾಗಶಾಲೆಗೆ ಬಂದರು. ಅಲ್ಲಿಯ ದೃಶ್ಯವು ತುಂಬಾ ಬೀಭತ್ಸವಾಗಿತ್ತು. ಅಗ್ನಿಕುಂಡಕ್ಕೆ ಬಿದ್ದ ದಕ್ಷನ ತಲೆ ಪೂರ್ತಿ ಸುಟ್ಟು ಕರಕಾಗಿ ಹೋಗಿತ್ತು.

ಶಿವನು ವೀರಭದ್ರನನ್ನು ನೋಡಿ "ನೀನು ಉತ್ತರ ದಿಕ್ಕಿಗೆ ಹೋಗಿ, ಉತ್ತರ ದಿಕ್ಕಿಗೆ ತಲೆಯಿಟ್ಟು ನಿದ್ರಿಸಿಕೊಂಡಿದ್ದ ತಲೆಯನ್ನು ಕಡಿದು ತೆಗೆದುಕೊಂಡು ಬಾ" ಎಂದು ಆಜ್ಞೆಮಾಡಿ ಕಳುಹಿಸಿದನು.

ವೀರಭದ್ರನು ಹಾಗೆ ಮಲಗಿದ್ದ ಒಂದು ಟಗರಿನ ತಲೆಯನ್ನು ಕಡಿದು ತೆಗೆದುಕೊಂಡು ಬಂದನು. ದಕ್ಷನ ಮುಂಡಕ್ಕೆ ಆ ಟಗರಿನ ತಲೆಯನ್ನು ತಗಲಿಸಿ ಬದುಕಿ ಏಳುವಂತೆ ಮಾಡಿದನು ಶಿವ. ಈಗ ದಕ್ಷನು ಮೊದಲಿನಂತಿರಲಿಲ್ಲ. "ಪರಮಶಿವಾ! ನಾನು ನಿನ್ನ ದೊಡ್ಡತನವನ್ನು ತಿಳಿಯದೆ ನಿನ್ನನ್ನು ದೂಷಿಸಿದೆನು. ನಿನ್ನ ದಯೆಯಿಂದ ನನಗೆ ಒಳ್ಳೆಯ ಬುದ್ಧಿಯಿಂದ ಕೂಡಿದ ತಲೆ ಏರ್ಪಟ್ಟಿದೆ, ನನ್ನ ತಪ್ಪುಗಳನ್ನು ಕ್ಷಮಿಸಿ ಕಾಪಾಡು" ಎಂದು ದಕ್ಷನು ಪ್ರಾರ್ಥಿಸಿದನು.

ಶಿವನು ದಕ್ಷನ ಕ್ಷಮಾಪಣೆಯನ್ನು ಆಮೋದಿಸಿ, "ದಕ್ಷಾ, ಕಾರಣವಿಲ್ಲದೆ ಯಾವ ಕಾರ್ಯವೂ ಹುಟ್ಟುವುದಿಲ್ಲ. ನಿನ್ನ ಕೋಪಕ್ಕೂ ಅಂತಹುದೇ

ಕಾರಣ. ಅಂತಲೇ ನಿನ್ನ ಎಲ್ಲಾ ತಪ್ಪುಗಳನ್ನೂ ಕ್ಷಮಿಸಿದ್ದೇನೆ. ಚೆನ್ನಾಗಿರು" ಎಂದನು ಶಿವ.

ದಕ್ಷನಿಂದ ವೇದೋಕ್ತ ವಿಧಿಯಂತೆ ಯಾಗವನ್ನು ಪೂರ್ತಿ ಮಾಡಿಸಲಾಯಿತು, ಯಾಗ ಭಾಗವು ತ್ರಿಮೂರ್ತಿಗಳಿಗೂ ಸರಿಯಾಗಿ ಲಭಿಸಿತು.

ಆದೆಲ್ಲಾ ಮುಗಿದ ಮೇಲೆ ಶಿವನು ದಕ್ಷನನ್ನು ನೋಡಿ, ಏನಾದರೂ ವರ ಕೇಳುವಂತೆ ಹೇಳಿದನು. ತಾನು ತನ್ನ ಹೆಂಡತಿಯೊಂದಿಗೆ ಯಾಗ ಮಾಡಿದ ಸ್ಥಳವು "ದಕ್ಷಾವಾಟಿಕೆ" ಎಂಬ ಹೆಸರಿನಿಂದ ಪ್ರಸಿದ್ಧ ವಾಗಬೇಕೆಂದು, ಅದು ಶಿವ ನಿಲಯವಾಗಿರಬೇಕೆಂದು ದಕ್ಷನು ಕೇಳಿಕೊಂಡನು, ಶಿವನು ಅದಕ್ಕೆ ಒಪ್ಪಿದನು. ಆಗ ಶಿವನು ಭದ್ರಕಾಳೀ ವೀರಭದ್ರರನ್ನು ನೋಡಿ, "ಈ ಪ್ರದೇಶಕ್ಕೆ ಆಗ್ನೇಯದಲ್ಲಿರುವ ಗೌತಮೀ ತೀರದಲ್ಲಿ ನೀವಿಬ್ಬರೂ ನಿಮ್ಮ ನಿಮ್ಮ ಗಣಗಳೊಂದಿಗೆ ವಾಸ ಮಾಡಿರಿ" ಎಂದನು. ಎಲ್ಲಾ ಗಣಗಳಿಗೂ ಭದ್ರಕಾಳೀ ವೀರಭದ್ರರೇ ಅಧಿಪತಿಗಳಾದರು.

ಅಷ್ಟಾದ ಮೇಲೆ ಶಿವನು ಸತೀದೇವಿಯ ಶರೀರ ವನ್ನು ತೆಗೆದುಕೊಂಡು ಕೈಲಾಸಕ್ಕೆ ಹಿಂದಿರುಗಿದನು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ ಋಷಿಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಶಿವನು ಸತೀದೇವಿಯ ಶರೀರವನ್ನು ತನ್ನ ಪಕ್ಕ ದಲ್ಲಿಟ್ಟುಕೊಂಡು ತಪಸ್ಸಿನಲ್ಲಿ ಮಗ್ನನಾದನು. ಸತಿಯ ಶರೀರವು ಶಿವನೊಳಗೇ ಐಕ್ಯವಾಯಿತು.

ದಕ್ಷನ ಕುಮಾರಿಯರಲ್ಲಿ ಸ್ವಧಾ ಎಂಬವಳು ಪಿತೃದೇವತೆಗಳಿಗೆ ಪತ್ನಿಯಾಗಿದ್ದಳು. ಅವಳಿಗೆ ಮೇನಕಾ, ಧನ್ಯಾ, ಕಳಾವತಿ ಎಂಬ ಮೂವರು ಕುಮಾರಿಯರು ಹುಟ್ಟಿದರು. ಆ ಮೂವರೂ ಒಬ್ಬರ ನ್ನೊಬ್ಬರು ಮೀರಿಸುವಷ್ಟು ಸುಂದರಿಯರು. ಅವರು ಸ್ವೇಚ್ಛೆಯಾಗಿ ಲೋಕಗಳಲ್ಲಿ ವಿಹರಿಸಿಕೊಂಡಿದ್ದರು.

ಒಮ್ಮೆ ಆ ಮೂವರೂ ಮಹಾಲಕ್ಷ್ಮೀ ವಿಷ್ಣು ಗಳನ್ನು ದರ್ಶನ ಮಾಡಲು ವೈಕುಂಠಕ್ಕೆ ಹೋದರು.



ಮೂವರೂ ತಮ್ಮ ನೃತ್ಯ ಗಾನಗಳಿಂದ ಲಕ್ಷ್ಮೀ ನಾರಾಯಣರನ್ನು ಆನಂದಪಡಿಸಿದ ಮೇಲೆ, ಒಂದು ಕಡೆಯಲ್ಲಿ ಕುಳಿತು ಆದೂ ಇದೂ ಮಾತಾಡಿ ಕೊಳ್ಳುತ್ತಿದ್ದರು. ಆ ಸಮಯದಲ್ಲಿ ಬ್ರಹ್ಮ ಮಾನಸ ಪುತ್ರರಾದ ಸನಕಸನಂದನ, ಸನತ್ಸುಜಾತ, ಸನತ್ಕುಮಾರರೆಂಬವರು ವಿಷ್ಣು ದರ್ಶನಕ್ಕೆ ಬಂದರು. ವಿಷ್ಣು ಮೊದಲಾದ ಎಲ್ಲರೂ ಎದ್ದು ನಿಂತು ಇದಿರುಗೊಂಡು ನಮಸ್ಕರಿಸಿ ಅವರನ್ನು ಗೌರವಿ ಸಿದರು. ಆದರೆ ಮೇನಕಾ, ಧನ್ಯಾ, ಕಳಾವತಿಯರು ಮಾತ್ರ ಕುಳಿತಲ್ಲಿಂದ ಏಳಲಿಲ್ಲ.

ಅದನ್ನು ನೋಡಿ ಸನತ್ಕುಮಾರನಿಗೆ ಕೋಪ ಬಂತು. "ನಿಮಗೆ ಗರ್ವವು ಚೆನ್ನಾಗಿ ತಲೆಗೇರಿದೆ. ಇನ್ನು ಮೇಲೆ ನೀವು ಸ್ವರ್ಗದಲ್ಲಿರಕೂಡದು. ಭೂಮಿಯಲ್ಲಿರುವವರನ್ನು ಮದುವೆಯಾಗಿ ಅಲ್ಲಿಯೇ ಇರತಕ್ಕದ್ದು" ಎಂದು ಆ ಮೂವರು ಕುಮಾರಿಯ ರನ್ನೂ ಅವರು ಶಪಿಸಿದರು.



ವೃಷಭನ ಪತ್ನಿ ಕಳಾವತಿಗೆ ಹುಟ್ಟಿದ ರಾಧೆ ಕೃಷ್ಣನನ್ನು ಮದುವೆಯಾಗುವಳು.)

ಹೀಗೆ ಶಾಪಾನುಗ್ರಹ ಪಡೆದ ಆ ಮೂವರು ಕುಮಾರಿಯರೂ ತೃಪ್ತರಾಗಿ ಲಕ್ಷ್ಮೀನಾರಾಯಣರ ಅಪ್ಪಣೆ ಪಡೆದು ಹೊರಟು ಹೋದರು.

ಮೇನಕೆಗೆ ತಕ್ಕ ಗಂಡನೆಂದು ದೇವತೆಗಳು ಹಿಮವಂತನನ್ನು ಆರಿಸಿಕೊಂಡರು. ಹಿಮವಂತನು ತುಂಬ ಚೆಲುವನಾಗಿದ್ದನು. ಅವನು ತನ್ನ ಬೆಟ್ಟಗುಡ್ಡಗಳಲ್ಲಿರುವ ಆಶ್ರಮಗಳಲ್ಲಿ ತಿರುಗುತ್ತ, ಅಲ್ಲಿರುವ ದೇವತೆಗಳ ಯೋಗಕ್ಷೇಮಗಳನ್ನೂ, ತಪಸ್ಸು ಮಾಡಿಕೊಂಡಿರುವ ಋಷಿಗಳ ಯೋಗಕ್ಷೇಮವನ್ನೂ ಶ್ರದ್ಧೆಯಿಂದ ನೋಡಿಕೊಳ್ಳುತ್ತಿದ್ದನು. ದೇವತೆಗಳು ಅಂತಹ ಹಿಮವಂತರಾಜನೊಂದಿಗೆ ಮೇನಕೆಯ ವಿವಾಹವನ್ನು ನಡೆಸಿದರು.

ಒಂದುದಿನ ಹಿಮವಂತನ ಬಳಿಗೆ ಬ್ರಹ್ಮ, ವಿಷ್ಣು, ದೇವೇಂದ್ರರು ಇತರ ದೇವತೆಗಳೊಂದಿಗೆ ಬಂದರು. ಹಿಮವಂತನು ಅವರಿಗೆ ಷೋಡಶೋಪಚಾರಗಳನ್ನು ಮಾಡಿ ಬಂದ ಕಾರಣವೇನೆಂದು ಕೇಳಿದನು.

"ದೇವಾಧಿದೇವಾ! ನಿನಗೆ ತಿಳಿಯದುದೇನೂ ಇಲ್ಲ. ಮಹಾಶಕ್ತಿ ದಕ್ಷನ ಕುಮಾರಿಯಾಗಿ ಸತೀ ಎಂಬ ಹೆಸರಿನಲ್ಲಿ ಶಿವನನ್ನು ಮದುವೆಯಾಗಿ ಕಡೆಗೆ ಶರೀರವನ್ನು ತ್ಯಜಿಸಿದಳಷ್ಟೆ? ಸತಿ ಹೋದ ಮೇಲೆ ಶಿವನು ದೊಡ್ಡ ವಿರಕ್ತಿಯಿಂದ ತಪಸ್ಸುಮಾಡಿಕೊಂಡಿದ್ದಾನೆ. ಆದರಿಂದ ಲೋಕಕ್ಕೆ ಯಾರ ಭಯವೂ ಇಲ್ಲದಾಗಿದೆ. ತಾರಕಾಸುರನೆಂಬವನು ಲೋಕಪೀಡಕನಾಗಿ ಮೇಲೆ ಮೇಲೆ ವರ್ಧಿಸಿಕೊಂಡಿದ್ದಾನೆ. ಆದುದರಿಂದ ನೀನು ಮೇನಕಾ ಸಹಿತನಾಗಿ ಆ ಮಹಾಶಕ್ತಿ ದೇವಿಯನ್ನು ತಪಸ್ಸಿನಿಂದ ಮೆಚ್ಚಿಸಿ, ಅವಳು ನಿಮ್ಮ ಮಗಳಾಗಿ ಹುಟ್ಟುವಂತೆ ವರ ಪಡೆಯಬೇಕು" ಎಂದು ದೇವತೆಗಳು ಹಿಮವಂತನಿಗೆ ಪ್ರೇರೇಪಣೆ ಮಾಡಿದರು.

ಆಗ ಹೆದರಿದ ಧನ್ಯಾದಿ ಕುಮಾರಿಯರು ಪಶ್ಚಾತ್ತಾಪಪಟ್ಟು, "ಮುನೀಶ್ವರರೇ! ಅಜ್ಞಾನಿಗಳಾದ ನಮ್ಮ ತಪ್ಪುಗಳನ್ನು ಕ್ಷಮಿಸಿ, ನಮಗೆ ಶಾಪ ವಿಮೋಚನೆಯನ್ನು ಅನುಗ್ರಹಿಸಿ, ದಯೆದೋರಬೇಕು" ಎಂದು ದೈನ್ಯತೆಯಿಂದ ಬೇಡಿಕೊಂಡರು.

ಆಗ ಸನಕಸನಂದನಾದಿಗಳು ಶಾಂತರಾಗಿ, "ಗರ್ವಕ್ಕೆ ಪ್ರಾಯಶ್ಚಿತ್ತವು ಗರ್ವವು ಇಳಿದು ಹೋಗುವುದೇ. ನಿಮಗೆ ಕೊಟ್ಟ ಶಾಪವು ಲೋಕಗಳಿಗೆ ಒಳಿತು ಮಾಡುವಂತೆಯೇ ಪರಿಣಮಿಸುತ್ತದೆ. ಚಿಂತಿಸಬೇಡಿರಿ." ಎಂದರು.

(ಇದು ಹೇಗೆ ನಿಜವಾಯಿತೆಂದರೆ, ಆ ಮೂವರಿಗೆ ಹುಟ್ಟಿದ ಕುಮಾರಿಯರು ಮೂರು ಯುಗಗಳಲ್ಲಿ ಅವತಾರ ಪುರುಷರನ್ನೇ ಮದುವೆಯಾಗುವರು. ಮೇನಕೆಗೆ ಹುಟ್ಟಿದ ಪಾರ್ವತಿ ಶಿವನನ್ನು ಮದುವೆಯಾಗುತ್ತಾಳೆ. ಜನಕರಾಜನ ಪತ್ನಿ ಧನ್ಯಳಿಗೆ ಹುಟ್ಟಿದ ಸೀತೆ ರಾಮನನ್ನು ವಿವಾಹವಾಗುತ್ತಾಳೆ.

ಅಷ್ಟಕ್ಕೆ ಬಿಡದೆ ಬ್ರಹ್ಮ, ವಿಷ್ಣು, ಮಹೇಂದ್ರಾದಿಗಳು ವಿಂಧ್ಯ ಪರ್ವತಕ್ಕೆ ಹೋಗಿ, ಅಲ್ಲಿ ತಪಸ್ಸಿನಲ್ಲಿ ಮಗ್ನಳಾಗಿದ್ದ ಮಹಾದೇವಿಯನ್ನು ಬಗೆ ಬಗೆಯಾಗಿ ಸ್ತೋತ್ರ ಮಾಡತೊಡಗಿದರು.

ಆಗ ಅವರ ಮುಂದೆ ದಿವ್ಯ ಕಾಂತಿಗಳನ್ನು ಎಲ್ಲಾ ದಿಶೆಗಳಿಗೂ ಚಿಮ್ಮಿಸುತ್ತ, ಸಾವಿರ ಕೈಗಳಲ್ಲಿ ತ್ರಿಶೂಲವೇ ಮೊದಲಾದ ಆಯುಧಗಳನ್ನು ಧರಿಸಿಕೊಂಡಿದ್ದ ಪರದೇವತೆ ಅವರ ಮುಂದೆ ಪ್ರತ್ಯಕ್ಷಳಾದಳು. ಆಗ ಬ್ರಹ್ಮಾದಿಗಳು ಅವಳ ಮುಂದೆ ಕೈಜೋಡಿಸಿ, "ತಾಯೇ! ಭಗವತೀ! ನೀನು ದಕ್ಷನಿಗೆ ಕುಮಾರಿಯಾಗಿ ಹುಟ್ಟಿ, ಸತೀ ಎಂಬ ಹೆಸರಿನಿಂದ ಶಿವನನ್ನು ಮದುವೆಯಾಗಿ ಶರೀರ ತ್ಯಾಗಮಾಡಿದವಳು. ದಕ್ಷನ ಅಹಂಭಾವದ ಕೋಪವೇ ಅದಕ್ಕೆ ಕಾರಣವಾಯಿತು. ಈಗ ಸತೀ ವಿಯೋಗದಿಂದ ವಿರಕ್ತನಾದ ಶಿವನು ತಪಸ್ಸಿನಲ್ಲಿ ಮುಳುಗಿ ಹೋಗಿದ್ದಾನೆ. ಆದುದರಿಂದ ತಾರಕಾಸುರನೇ ಮೊದಲಾದವರು ಭಯವಿಲ್ಲದೆ ಯಥೇಚ್ಛೆಯಾಗಿ ಲೋಕವನ್ನು ಪೀಡಿಸುತ್ತಿದ್ದಾರೆ. ಈಗ ನೀನು ದಯಮಾಡಿ ಮೇನಕೆಯ ಗರ್ಭದಲ್ಲಿ ಹಿಮಂತನ ಮಗಳಾಗಿ ಪಾರ್ವತಿ ಎನಿಸಿ ಶಿವನನ್ನು ವಿವಾಹಮಾಡಿಕೊಂಡು, ತಾರಕಾಸುರಾದಿಗಳ ಸಂಹಾರಕ್ಕೆ ವೀರ ಪುತ್ರನನ್ನು ಹೆತ್ತು ಕೊಡಬೇಕು ಅಮ್ಮಾ" ಎಂದರು.

ಮಹಾದೇವಿ ಬ್ರಹ್ಮ ವಿಷ್ಣ್ವಾದಿಗಳ ಕೋರಿಕೆಯನ್ನು ನೆರವೇರಿಸುವೆನೆಂದು ವಚನವಿತ್ತು ಅಂತರ್ಹಿತಳಾದಳು.

ಇಷ್ಟರಲ್ಲಿ ಮೇನಕಾ ಹಿಮವಂತರು ಬ್ರಹ್ಮ ಮೊದಲಾದವರ ಇಷ್ಟದಂತೆ, ಅವರು ಹೇಳಿದ ಕ್ರಮದಲ್ಲಿ ತಪೋ ನಿಯಮವನ್ನು ಹಿಡಿದು, ಚೈತ್ರಶುದ್ಧ ಪಾಡ್ಯದ ದಿನದಿಂದ ಇಪ್ಪತ್ತೇಳು ವಾರಗಳ ವರೆಗೆ ಅತ್ಯಂತ ಭಕ್ತಿಯಿಂದ ಪರದೇವತೆಯನ್ನು ಪೂಜಿಸಲು ತೊಡಗಿದರು.

ಪರದೇವತೆ ಅವರ ಭಕ್ತಿಗೆ ಸಂತೋಷಪಟ್ಟು ಅವರ ಮುಂದೆ ಪ್ರತ್ಯಕ್ಷಳಾಗಿ ಏನು ವರ ಬೇಕೆಂದು ಕೇಳಿದಳು.

ಆಗ ಮೇನಕಾ ಹಿಮವಂತರು "ತಾಯೇ! ನಿನ್ನ ದಯದಿಂದ ನಮ್ಮ ಜನ್ಮ ಸಾರ್ಥಕವಾಗುವಂತೆ ತಾರಕವಾಯಿತು. ನಮಗೆ ಬಲ ಶೌರ್ಯಗಳಿಂದ ಗುಣಾಢ್ಯರಾದ ನೂರುಮಂದಿ ಪುತ್ರರನ್ನು ಪ್ರಸಾದಿಸು. ನೀನು ನಮಗೆ ಕುಮಾರಿಯಾಗಿ ಹುಟ್ಟಿ, ಲೋಕರಕ್ಷಣಾರ್ಥವಾಗಿ ಪರಮಶಿವನನ್ನು ಮದುವೆಯಾಗಿ ನಮಗೆ ಶಾಶ್ವತ ಕೀರ್ತಿಯನ್ನು ಬರಿಸು" ಎಂದು ಕೇಳಿಕೊಂಡರು.

ಅವರ ಇಷ್ಟವನ್ನು ನೆರವೇರಿಸುವೆನೆಂದು ಹೇಳಿ ಪರದೇವತೆ ಅಂತರ್ಧಾನಳಾದಳು.






ಮೇನಕಾ ಹಿಮವಂತರು ತಮ್ಮ ಮನೆಯನ್ನು ಸೇರಿಕೊಂಡು ಬಹಳ ಸಂತೋಷದಿಂದ ದಿನಗಳನ್ನು ಕಳೆಯುತ್ತಿದ್ದರು, ಕಾಲಕ್ರಮದಲ್ಲಿ ಮೇನಕೆ ಗರ್ಭವತಿಯಾಗಿ, ಒಂಬತ್ತು ತಿಂಗಳು ತುಂಬಿದ ಮೇಲೆ, ಐದು ಗ್ರಹಗಳು ಉಚ್ಚದಶೆಯಲ್ಲಿರುವ ಶುಭ ಘಳಿಗೆಯಲ್ಲಿ ಮಗನನ್ನು ಪ್ರಸವಿಸಿದಳು. ಆ ಮಗನಿಗೆ ಮೈನಾಕನೆಂದು ಹೆಸರು. ಅವನ ತರುವಾಯ ಮೇನಕೆ ಕ್ರಮವಾಗಿ ತೊಂಬತ್ತೆಂಟು ಮಂದಿ ಕುಮಾರರನ್ನೇ ಪ್ರಸವಿಸಿದಳು.

ನೂರನೆಯ ಸಾರಿ ಮೇನಕೆ ಗರ್ಭಿಣಿಯಾಗಿ ವಿಶೇಷ ತೇಜಸ್ಸಿನಿಂದ ತಿಂಗಳ ಮೇಲೆ ತಿಂಗಳು ಕಳೆಯುತ್ತ, ಒಂಬತ್ತು ತಿಂಗಳು, ಹನ್ನೊಂದು ದಿನಗಳಲ್ಲಿ ಚೈತ್ರಶುದ್ಧ ನವಮಿಯ ದಿನ, ಆರ್ದ್ರಾ ನಕ್ಷತ್ರದಲ್ಲಿ ಅತ್ಯಂತ ತೇಜಸ್ಸಿನ ಹೆಣ್ಣು ಶಿಶುವನ್ನು ಪಡೆದಳು. ಪಾರ್ವತಿ ಎಂದು ಅವಳಿಗೆ ನಾಮಕರಣವಾಯಿತು. ಆ ಶಿಶು ಜನನವಾದ ಹೊತ್ತಿನಲ್ಲಿ ದಿಕ್ಕುಗಳೆಲ್ಲಾ ಬೆಳಕಾದುವು. ದೇವತೆಗಳು ಪುಷ್ಪವೃಷ್ಟಿ ಸುರಿಸಿದರು. ಬ್ರಹ್ಮ, ವಿಷ್ಣು ಮತ್ತು ಇಂದ್ರಾದಿ ದೇವತೆಗಳು ಪರದೇವತೆಯನ್ನು ಸ್ತೋತ್ರ ಮಾಡಿದರು.

ಪಾರ್ವತಿ ಶಿಶು ನಾಲ್ಕು ಕೈಗಳಿಂದ, ನೀಲ ಕಾಂತಿಯ ಶರೀರ ಛಾಯೆಯಿಂದ, ಲಲಾಟ ನೇತ್ರದಿಂದ ಕಾಳಿಯ ಆಕಾರದಲ್ಲಿ ಹುಟ್ಟಿತ್ತು. ಅದನ್ನು ನೋಡಿ ಮೇನಕೆ ಭಕ್ತಿಭಾವದಿಂದ ಕಣ್ಣು ಮುಚ್ಚಿ, ಮಗು ಸಾಧಾರಣ ಮಾನವ ರೂಪದಲ್ಲಿರಬೇಕೆಂದು ಪ್ರಾರ್ಥಿಸಿದಳು. ಆಗ ಮಗುವಿನ ರೂಪವು ಮಾನವ ಶಿಶುವಿನಂತಾಯಿತು. ಅಳಲಿಕ್ಕೂ ತೊಡಗಿತು.

ತನಗೊಬ್ಬಳು ಕುಮಾರಿ ಹುಟ್ಟಿದಳೆಂಬ ವಾರ್ತೆಯನ್ನು ಕೇಳಿ ಹಿಮವಂತನು, ಅತ್ಯಂತ ಸಂತೋಷದಿಂದ ತುಂಬಿ, ಪುರೋಹಿತರನ್ನೂ, ಇತರ ಬ್ರಾಹ್ಮಣರನ್ನೂ ಕರೆದುಕೊಂಡು, ಬಾಣಂತಿಯ ಹತ್ತಿರ ಬಂದು, ಪಚ್ಚಕರ್ಪೂರದ ದೀಪಗಳನ್ನು ಹಚ್ಚಿಸಿ, ಕಸ್ತೂರೀಜಲವನ್ನು ಸಿಂಪಡಿಸಿ, ನೃತ್ಯ ಗಾನಗಳನ್ನು ಏರ್ಪಡಿಸಿ, ಅವರೆಲ್ಲರಿಗೂ ಧನಧಾನ್ಯಗಳನ್ನೂ

## ೧. ಪಾರ್ವತಿಯ ಜನನ



ಬಂಗಾರದ ಆಭರಣಗಳನ್ನೂ, ಪಟ್ಟೆ ಪೀತಾಂಬರಗಳನ್ನೂ ಕಾಣಿಕೆ ಕೊಟ್ಟು, ಕುಮಾರರೊಂದಿಗೂ ಮಗಳೊಂದಿಗೂ ಸೊಗಸಾಗಿ ಕಾಲವನ್ನು ಕಳೆಯ ತೊಡಗಿದನು.

ಪಾರ್ವತಿ ದಿನದಿಂದ ದಿನಕ್ಕೆ ಬೆಳೆಯುತ್ತ, ಎಲ್ಲರನ್ನೂ ಸಂತೋಷಪಡಿಸಿಕೊಂಡಿದ್ದಳು. ಗೆಳತಿಯರೊಂದಿಗೆ ವನಗಳಲ್ಲಿ ಲೀಲಾವಿಹಾರ ಮಾಡುವಳು. ಮದಿಸಿದ ಸಿಂಹಗಳ ಮೇಲೆ ಕುಳಿತುಕೊಂಡು ಬೆಟ್ಟಗಳ ಮೇಲೆ ತಿರುಗುವಳು. ಗುಹೆಗಳಲ್ಲಿಯೂ, ಮರಳ ದಿಣ್ಣೆಗಳ ಮೇಲೆಯೂ ಕಣ್ಣು ಮುಚ್ಚಾಲೆಯಾಡುವಳು. ತನ್ನ ಗೆಳತಿಯರನ್ನು ಮಕ್ಕಳ ಹಾಗೆ ನಟಿಸಲು ಹೇಳಿ, ತಾನು ತಾಯಿಯ ಹಾಗೆ ಅವರಿಗೆ ಹಣ್ಣುಗಳನ್ನು ಹಂಚಿಕೊಡುವಳು. ಚೆಂಡಾಟ ಆಡುವಾಗ ಒಂದು ಚೆಂಡನ್ನು ತನ್ನ ಸ್ನೇಹಿತೆಯರಿಗೆ ತೋರಿಸಿ, "ಇದು ಬ್ರಹ್ಮಾಂಡ. ಇದನ್ನು ನಾನು ಹೀಗೆ ಆಡಿಸುತ್ತೇನೆ" ಎಂದು ಗಿರಿಗಿರಿ ತಿರಿಗಿಸುವಳು. ಮರಳಿನಲ್ಲಿ ಮನೆಗಳನ್ನು ಕಟ್ಟುತ್ತ, ಅವುಗಳಿಗೆ ಬ್ರಹ್ಮಭವನ, ವಿಷ್ಣು ಮಂದಿರ, ಮಹೇಶ್ವರಾಲಯ ಎಂದು ಹೆಸರುಗಳನ್ನಿಡುವಳು. "ನಾನೇ ಇವರನ್ನು ಆಡಿಸುವವಳು" ಎಂದು ನಲಿಯುವಳು. ಆಮೇಲೆ ಮನೆಗಳನ್ನು ನಾಶಪಡಿಸುವಾಗ, "ನಾನೇ ಇವುಗಳನ್ನು ನಾಶ ಮಾಡುತ್ತೇನೆ. ಹುಟ್ಟಿಸುವವಳೂ ನಾನೇ! ಹೊಡೆದು ಹುಗಿಯುವವಳೂ ನಾನೇ" ಎಂದು ಮತ್ತೆ ಕುಣಿಯುವಳು.

ಹೀಗೆಲ್ಲಾ ಬಾಲಲೀಲೆಗಳನ್ನಾಡಿ ಬಾಲ್ಯವನ್ನು ಕಳೆದು, ವಿದ್ಯಾಭ್ಯಾಸಮಾಡಲಾರಂಭಿಸಿದಳು. ಅದು ಕೂಡ ನೀರು ಕುಡಿಯುವಷ್ಟು ಸುಲಭವಾಗಿ ಬಹು ಬೇಗನೇ ಸಕಲ ವಿದ್ಯೆಗಳಲ್ಲಿಯೂ ಪಾರಂಗತಳಾದಳು. ಅದರ ಮೇಲೆ ಅವಳಿಗೆ ಧ್ಯಾನಾಸಕ್ತಳಾಗಲು ಬೇಕಾದಷ್ಟು ಸಮಯ ಸಿಗುತ್ತಿತ್ತು. ಪರಮೇಶ್ವರನನ್ನು ಕುರಿತೇ ಅವಳ ಧ್ಯಾನ. ಸಾಮಗಾನದಿಂದ ಪರಮೇಶ್ವರನನ್ನು ಸ್ತುತಿಸುತ್ತಾ ತಾನೂ ಸಂತೋಷಿಸಿಕೊಂಡು ಇತರರನ್ನೂ ಸಂತೋಷಪಡಿಸುವಳು. ಆ ಸಮಯದಲ್ಲಿ ಗೆಳತಿಯರು "ಪಾರ್ವತೀ" ಎಂದು ಕರೆದರೆ ಅವಳಿಗೆ ಕೇಳಿಸಲಾರದು. "ಶಿವಾಣೀ" ಎಂದು ಕರೆದರೆ ಕೂಡಲೇ ತಿರುಗಿ ನೋಡುವಳು. ಸಿಂಹವು ಅವಳ ವಾಹನವಾಗಿ, ಯಾವಾಗಲೂ ಪಕ್ಕದಲ್ಲೇ ಇರುತ್ತಿತ್ತು. ಸಿಂಹದ ಮೇಲೆ ತಿರುಗಾಡುವಾಗ ಒಂದೊಂದು ಸಾರಿ ಅವಳ ಕೈಯಲ್ಲಿ ಬಿಲ್ಲುಬಾಣ ತ್ರಿಶೂಲಗಳು ಕಾಣುತ್ತಿದ್ದುವು. ಅವಳು ಸಿಂಹದ ಹೊರತು ಬೇರೆ ವಾಹನವೇರಿದುದನ್ನಾಗಲೀ, ಬೇರೆ ಆಯುಧಗಳನ್ನು ಧರಿಸಿದುದನ್ನಾಗಲೀ ಯಾರೂ ನೋಡಿಲ್ಲ. ಒಂದೊಂದು ಸಾರಿ ವೀಣೆಯನ್ನು ಬಾರಿಸಿಕೊಂಡು ನಾದಲೀಲೆಯಲ್ಲಿ ತಲ್ಲೀನಳಾಗಿರುವಳು. ಅವಳ ಸ್ವರ ಮಾಧುರ್ಯವು ವಿದ್ಯಾಧರಿಯರನ್ನು ಮೀರಿಸುತ್ತಿದ್ದಿತು. ಅವಳು ಮಾಡುವ ನೃತ್ಯಲೀಲೆಗಳು ದೇವತೆಗಳನ್ನು ನಾಚಿಸುವಂತಿದ್ದುವು.



ಬಂಡೆಗಳ ಮೇಲೆ ಶಿವನ ರೂಪಗಳನ್ನು ಚಿತ್ರಿಸಿ ಗೆಳತಿಯರಿಗೆ ತೋರಿಸಿ ಆನಂದಿಸುವಳು.

ಹೀಗೆ ಪಾರ್ವತಿ ಪ್ರೌಢಳಾಗುತ್ತ ಬರುತ್ತಿರಲು, ಒಂದು ದಿನ ನಾರದನು ಹಿಮವಂತನನ್ನು ನೋಡಲು ಬಂದನು. ನಾರದನನ್ನು ದೂರದಲ್ಲಿ ನೋಡಿದ ಕೂಡಲೇ ಹಿಮವಂತನು ಇದಿರಾಗಿ ಹೋಗಿ ಆತನನ್ನು ಪೂಜಿಸಿ ಕರೆದುಕೊಂಡು ಬಂದು ಆಸನದಲ್ಲಿ ಕೂಡಿಸಿ, ಪಾರ್ವತಿಯನ್ನು ಕರೆದು ನಮಸ್ಕಾರ ಮಾಡಿಸಿ, ತನ್ನ ಮಡಿಲಲ್ಲಿ ಕುಳ್ಳಿರಿಸಿಕೊಂಡು, "ಅಯ್ಯಾ, ನಾರದರೇ, ಈ ಹುಡುಗಿಗೆ ಎಂತಹ ಗಂಡನು ಬರುವನೆಂಬುದನ್ನು ದಯವಿಟ್ಟು ಹೇಳಬೇಕು" ಎಂದು ಕೇಳಿಕೊಂಡನು.

ನಾರದನು ಪಾರ್ವತಿಯ ಕೈಯಲ್ಲಿ ಗಜ, ಮತ್ಸ್ಯ, ಅಂಕುಶ, ರಥಗಳ ರೇಖೆಗಳಿರುವುದನ್ನು ನೋಡಿ, "ಹಿಮವಂತಾ, ನಿನ್ನ ಮಗಳ ಹಸ್ತದಲ್ಲಿ ಪರದೇವತೆಯ ಲಕ್ಷಣಗಳಿವೆ. ಇವಳ ಮೂಲಕ ನಿಮಗೆಲ್ಲಾ ದೊಡ್ಡ ಕೀರ್ತಿ ಬರುತ್ತದೆ. ಲಕ್ಷ್ಮಿ, ಸರಸ್ವತಿಯರಿಗೆ ಸಮಾನವಾದ ಗೌರವ ಪೂಜೆಗಳು ಇವಳಿಗೂ ನಡೆಯುತ್ತವೆ. ಇವಳಿಗೆ ತಕ್ಕ ಪತಿ ಶಿವನೇ ಸರಿ. ಪರಮೇಶ್ವರನೇ ನಿಜ. ಬೇರೆ ಯಾವ ಆಲೋಚನೆಯನ್ನೂ ಮಾಡದೆ, ಈ ಹುಡುಗಿಯನ್ನು ಶಿವನಿಗೇ ಕೊಟ್ಟು ವಿವಾಹ ಮಾಡು" ಎಂದನು.

ಅದನ್ನು ಹೇಳಲಿಕ್ಕಾಗಿಯೇ ಬಂದವನ ಹಾಗೆ, ನಾರದನು, ಮತ್ತೆ ಅಲ್ಲಿಂದ ಎದ್ದು ಹೊರಟು ಹೋದನು. ಆಮೇಲೆ ಹಿಮವಂತನು ಮೇನಕೆಯೊಂದಿಗೆ, "ನಿನಗೆ ನೆನಪಿದೆಯೇ ? ನಮಗೊಬ್ಬಳು ಕುಮಾರಿ ಜನಿಸಬೇಕೆಂದೂ, ಅವಳು ಪರಮಶಿವನನ್ನೇ ವರಿಸುವವಳಾಗಬೇಕೆಂದೂ ನಾವು ಪರದೇವತೆಯೊಂದಿಗೆ ವರ ಕೇಳಿ ಪಡೆದಿದ್ದೇವೆ. ಈಗ ನಾರದನು ಬಂದು ಹೇಳಿದ ಮಾತಿಗೂ-ನಾವು ಪಡೆದ ವರಕ್ಕೂ ಸರಿ ಹೋಯಿತು" ಎಂದನು.

ಮೇನಕೆ ಬಹಳ ಸಂತೋಷದಿಂದ, "ಹೌದು ಹೌದು. ಪಾರ್ವತಿ ಅಂತಹ ವರ ಪುತ್ರಿಯೇ ನಿಜ. ಈಗ ಅವಳಿಗೆ ಮದುವೆಯ ವಯಸ್ಸು ಬಂದಿದೆ. ತಡಮಾಡದೆ ಮುಂದಿನ ಪ್ರಯತ್ನ ನೋಡಿರಿ" ಎಂದು ಹೇಳಿದಳು.

"ಈ ಮೊದಲು ನಡೆದ ಸಂಗತಿ ಈಗ ನೆನಪಾಗುತ್ತಿದೆ. ಶಿವನು ಸತಿಯನ್ನು ಕಳೆದುಕೊಂಡ ಮೇಲೆ, ಅವಳ ಶರೀರವನ್ನು ಹೆಗಲಲ್ಲಿ ಹೊತ್ತುಕೊಂಡು ಪ್ರಪಂಚವೆಲ್ಲಾ ತಿರುಗಿ ಗಂಗಾಸಾಗರ ಸಂಗಮದ ಹತ್ತಿರ ಕಾಳೀ ಘಟ್ಟದಲ್ಲಿ ನೃತ್ಯ ಮಾಡಿಕೊಂಡಿದ್ದನು. ಆಗ ವಿಷ್ಣು ತನ್ನ ಮಾಯೆಯಿಂದ ಸತಿಯ ಶರೀರವನ್ನು ಕಾಳೀ ರೂಪಕ್ಕೆ ಮಾರ್ಪಡಿಸಿ ಅಲ್ಲಿಯೇ ಸ್ಥಾಪನೆ ಮಾಡಿಸಿ, ಶಿವನಿಗೆ ಜ್ಞಾನೋಪದೇಶ ಮಾಡಿದನೆಂದೂ ಕೇಳಿದ್ದೇನೆ. ಅದರಿಂದ ಶಿವನು ವೈರಾಗ್ಯ ಹೊಂದಿ, ಸರ್ವಸಂಗ ಪರಿತ್ಯಾಗಿಯಾಗಿ ವೀರಾಸನದಲ್ಲಿ ಕುಳಿತು ತಪಸ್ಸಿನಲ್ಲಿ ಲೀನವಾಗಿ



ಹೋಗಿದ್ದಾನೆ. ಈಗ ನನಗಿರುವ ನಂಬುಗೆ ಶಿವನು ದೊಡ್ಡ ಭಕ್ತವತ್ಸಲನೆಂಬುದೇ. ಅಂಥವನ ವೈರಾಗ್ಯ ವನ್ನು ಹೋಗಲಾಡಿಸಲು ಭಕ್ತಿಭಾವದಿಂದ ತಪಸ್ಸು ಮಾಡಿ ಮೆಚ್ಚಿಸುವುದೇ ಆಗಿದೆ. ಆದುದರಿಂದ ನಮ್ಮ ಪಾರ್ವತಿಯಿಂದ ತಪಸ್ಸು ಮಾಡಿಸಿ ಶಿವನನ್ನೇ ವರವಾಗಿ ಪಡೆಯುವಂತೆ ಮಾಡಬೇಕು. ಸತೀ ವಿಯೋಗದಿಂದ ವಿರಾಗಿಯಾದವನು, ಮತ್ತೊಬ್ಬಳು ಸತೀದರ್ಶನದಿಂದ ಅನುರಾಗಿಯಾಗುತ್ತಾನೆ" ಎಂದು ಹಿಮವಂತನು ಮೇನಕೆಯೊಂದಿಗೆ ಹೇಳಿದನು.

ಹೀಗೆ ಅಂದುಕೊಂಡಂತೆ ಮೇನಕಾ ಹಿಮವಂತರು ಶಿವನನ್ನು ಭಕ್ತಿಭಾವದಿಂದ ಧ್ಯಾನಿಸುತ್ತ ತಪಸ್ಸು ಮಾಡಲು ಮಗಳಿಗೆ ಹೇಳಿದರು. ಪಾರ್ವತಿಗೆ ಬೇಕಾದುದೂ ಅದೇ ಆಗಿತ್ತು.

ತರುವಾಯ ಮೇನಕಾ ಹಿಮವಂತರು ಶಿವನನ್ನು ಭಕ್ತಿಭಾವದಿಂದ ಧ್ಯಾನಿಸುತ್ತ, ಶಿವನು ತಪಸ್ಸು ಮಾಡಿಕೊಂಡಿರುವ ಕೈಲಾಸ ಪರ್ವತಕ್ಕೆ ಹೋದರು. ಅಲ್ಲಿ ಶಿವನ ಸುತ್ತಲೂ ಗಣಾಧಿಪತಿಗಳು ಆಯುಧ ಧಾರಿಗಳಾಗಿ ನಿಂತಿದ್ದರು. ಕೆಲವರು ಶಿವನಿಗೆ ಸಪರ್ಯೆ ಮಾಡುವವರು. ಹಿಮವಂತನು ತಾವು ಬಂದ ಉದ್ದೇಶವನ್ನು ಹೇಳಿದ ಕೂಡಲೇ ಶಿವನ ಸಮೀಪಕ್ಕೆ ಹೋಗಲು ರುದ್ರಗಣಗಳ ಅನುಮತಿ ಸಿಕ್ಕಿತು.

ಹಿಮವಂತನು ಪತ್ನೀಸಹಿತನಾಗಿ ಶಿವನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು, ಗಂಧಪುಷ್ಪಾದಿಗಳಿಂದ ಪೂಜಿಸಿ ಕೈ ಜೋಡಿಸಿಕೊಂಡು ನಿಂತನು.

ಶಿವನು ಕಣ್ಣು ತೆರೆದು ಅವರನ್ನು ನೋಡಿ,

"ಹಿಮವಂತಾ ! ನೀನು ಅತ್ಯಂತ ಪವಿತ್ರನಾದವನು. ಆದುದರಿಂದ ನಿನಗೆ ಸೇರಿದ ಈ ಕೈಲಾಸ ಪರ್ವತ ಭಾಗವನ್ನು ನನ್ನ ತಪಸ್ಸಿಗಾಗಿ ಆರಿಸಿಕೊಂಡಿದ್ದೇನೆ. ಅದಕ್ಕಾಗಿ ನಿನ್ನ ಅನುಮತಿ ಕೇಳಲಿಲ್ಲವೆಂಬುದನ್ನೂ ಅರಿತಿದ್ದೇನೆ" ಎಂದನು.

"ಮಹಾದೇವಾ, ಇಡಿಯ ಹಿಮಾಲಯವೇ ನಿನ್ನ ಪ್ರಸಾದವಾಗಿ ನನಗೆ ದೊರೆತಿರುವಾಗ, ನೀನು ಇಲ್ಲಿ ತಪಸ್ಸು ಮಾಡುವುದೆಂದರೆ ನನ್ನ ಭಾಗ್ಯವೆಂದೇ ತಿಳಿದಿದ್ದೇನೆ. ಇಲ್ಲಿ ನಿನಗೆ ಯಾವ ತೊಂದರೆಯೂ ಉಂಟಾಗದಂತೆ ನಾನು ಸದಾ ನೋಡುತ್ತಲೂ ಇದ್ದೇನೆ" ಎಂದನು.

"ಬಹಳ ಸಂತೋಷವಾಯಿತು. ನನ್ನ ಸಂತೋಷವು ವ್ಯರ್ಥವಾಗಬಾರದು. ಏನಾದರೊಂದು ವರವನ್ನು ಕೇಳು" ಎಂದನು ಶಿವ.

"ನನ್ನ ಕುಮಾರಿಯಾದ ಪಾರ್ವತಿ ನಿನ್ನ ಸೇವೆ ಮಾಡಬೇಕೆಂದು ಬಹಳ ಉತ್ಸಾಹದಲ್ಲಿದ್ದಾಳೆ. ಹಾಗೆ ಮಾಡಲು ಅವಳಿಗೆ ಅನುಮತಿ ಕೊಡಬೇಕು. ಬೇರೇನೂ ನಮಗೆ ಬೇಡ" ಎಂದನು ಹಿಮವಂತ.

"ಹಿಮವಂತಾ, ತಪಸ್ಸಿನಲ್ಲಿರುವವರಿಗೆ ಸ್ತ್ರೀಯರ ಪರಿಚರ್ಯೆ ಒಳ್ಳೆಯದಲ್ಲ. ಬೇಕಾದರೆ ನೀನು ಬಂದು ಪರಿಚರ್ಯೆ ಮಾಡಿ ಹೋಗಬಹುದು" ಎಂದನು ಶಿವ.

The Indian Institute of
Sri B. P. Wad
Bangalore-4

"ಮಹಾದೇವ, ನನ್ನ ಕುಮಾರಿ ಪವಿತ್ರಳಾದ ಕನ್ಯೆ. ಮಹಾದೇವಿಯ ವರದಿಂದ ಹುಟ್ಟಿದವಳು. ನಿನ್ನಂತಹ ಮಹಾ ವಿರಾಗಿಗೆ ಅವಳಿಂದ ತಪೋ ಭಂಗವಾಗಲು ಸಾಧ್ಯವಿಲ್ಲ. ನನ್ನ ಕೋರಿಕೆಯನ್ನು ಮನ್ನಿಸಿ, ನನ್ನ ಕುಮಾರಿಯ ಪರಿಚರ್ಯೆಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥನೆ" ಎಂದು ಹಿಮವಂತನು ಹೇಳಲು, ಶಿವನು ಸರಿ ಎಂದು ಒಪ್ಪಿಗೆ ಕೊಟ್ಟನು.

ಸತೀದೇವಿ ದೇಹಬಿಟ್ಟು ಹೋದ ಮೇಲೆ ಶಿವನು ಕೈಲಾಸ ಪರ್ವತಕ್ಕೆ ಬಂದು, ತಪಸ್ಸು ಪ್ರಾರಂಭಿಸಿದ ನಂತರ, ಅವನ ತಪಸ್ಸಿನ ಉಷ್ಣಕ್ಕೆ ಹಣೆಯಿಂದ ಜಾರಿದ ಒಂದು ಬೆವರಿನ ಬಿಂದು ಭೂಮಿಗೆ ಬಿತ್ತು. ಆ ಬಿಂದುವಿನಿಂದ ಒಬ್ಬ ಮಗನು ಹುಟ್ಟಿದನು. ಆಜಾನುಬಾಹುವಾದ ಅವನು ಕೆಂಪಗಿನ ಶರೀರ ಛಾಯೆಯಿಂದ ಒಪ್ಪುತ್ತಿದ್ದನು. ಸ್ಥೂಲ ಶರೀರದ ಅವನನ್ನು ಭೂದೇವಿ ಎತ್ತಿಕೊಂಡು ಶಿವನ ಮುಂದೆ ತಂದು ತೋರಿಸಿದಳು.

ಶಿವನು ಭೂದೇವಿಯನ್ನು ನೋಡಿ, "ನೀನು ಧನ್ಯಳಾದೆ. ನನ್ನ ಬೆವರಿನಿಂದ ಹುಟ್ಟಿದ ಈ ಕುಮಾರನು ಭೌಮನೆಂಬ ಹೆಸರಿನಿಂದ ನಿನಗೆ ಕೀರ್ತಿಯನ್ನು ತರುತ್ತಾನೆ" ಎಂದನು.

ಭೌಮನು ಬೆಳೆದು ದೊಡ್ಡವನಾಗಿ ಕಾಶೀ ಪಟ್ಟಣವನ್ನು ಸೇರಿ ಅಲ್ಲಿ ಶಿವನನ್ನು ಕುರಿತು ಘೋರ ತಪಸ್ಸು ಮಾಡಿದನು. ಪರಮೇಶ್ವರನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಗ್ರಹಮಂಡಲದಲ್ಲಿ ಅವನಿಗೊಂದು ಸ್ಥಾನವನ್ನು ಕೊಟ್ಟನು. ಆ ಭೌಮನಿಗೆ ಕುಜನೆಂದೂ, ಅಂಗಾರಕನೆಂದೂ ಮತ್ತೆರಡು ಹೆಸರುಗಳು ಬಂದು ಶಾಶ್ವತವಾದುವು.

ಶಿವನು ತಪಸ್ಸು ಮಾಡಿಕೊಂಡಿರುವ ಕಾಲದಲ್ಲಿಯೇ ಗಂಗಾ ನದಿ ಭೂಮಿಗಿಳಿದು ಬಂದು ಅವತರಿಸಿದಳು. ಭೂಲೋಕದಲ್ಲಿ ನೀರೇ ಇಲ್ಲದೆ ಹೋಗಿ, ಋಷಿಗಳೂ ಪಿತೃ ದೇವತೆಗಳೂ ಮೊರೆಯಿಟ್ಟುಕೊಳ್ಳಲು, ಬ್ರಹ್ಮನು ತನ್ನ ಕಮಂಡಲುವಿನಿಂದ ಒಂದು ನೀರಿನ ಬಿಂದುವನ್ನು ಹೊರಗೆ ಬಿಟ್ಟನು. ಅದು ಮಹಾ ಪ್ರವಾಹವಾಗಿ ಭೂಮಿಗೆ ಬರತೊಡಗಿತು. ಆದರಿಂದ ಭೂಲೋಕಕ್ಕೆ ಬರುವ ಅಪಾಯವನ್ನು ತಿಳಿದು ಶಿವನು ಆ ಪ್ರವಾಹವನ್ನು ತನ್ನ ಜಟಾಜೂಟದಲ್ಲಿ ಬಂಧಿಸಿ, ಒಂದು ಬೊಟ್ಟನ್ನು ಮಾತ್ರ ಒಣಗಿದ ಮಾನಸ ಸರೋವರದಲ್ಲಿ ಬಿಟ್ಟು ಮತ್ತೆ ತಪಸ್ಸು ಮಾಡಲು ಪ್ರಾರಂಭಿಸಿದನು.

ಇದು ಹೀಗಿರುವಾಗ ದಕ್ಷ ಪ್ರಜಾಪತಿಯ ಕುಮಾರಿಯರಲ್ಲಿ ಒಬ್ಬಳಾಗಿ, ಕಶ್ಯಪನ ಎರಡನೇ ಹೆಂಡತಿಯಾದ ದಿತೀದೇವಿ ಹಿರಣ್ಯಕಶಿಪು, ಹಿರಣ್ಯಾಕ್ಷರನ್ನು ಹಡೆದುದೂ, ಅವರು ಮಹಾ ಬಲವಂತರಾಗಿ ಮಹಾ ಕ್ರೂರರಾಗಿ ಎಲ್ಲಾ ಲೋಕಗಳನ್ನು ಪೀಡಿಸಿದುದೂ, ಮಹಾವಿಷ್ಣು, ವರಾಹ, ನಾರಸಿಂಹ ಅವತಾರಗಳನ್ನೆತ್ತಿ ಅವರನ್ನು ಸಂಹಾರ ಮಾಡಿದುದೂ ಆಗಿಹೋಯಿತು. ಪುತ್ರಶೋಕದಿಂದ ಬಳಲಿ



ಬೆಂಡಾಗಿ ಹೋದ ದಿತಿ, ಕಶ್ಯಪನ ಅನುಗ್ರಹದಿಂದ ಮತ್ತೆ ಗರ್ಭ ತಾಳಿದಳು. ಅದನ್ನು ನೋಡಿ ಇಂದ್ರನು ತನಗೆ ಇನ್ನೊಬ್ಬ ಪ್ರಬಲ ವಿರೋಧಿ ಹುಟ್ಟುತ್ತಾನೇನೋ ಎಂದು ಹೆದರಿ ದಿತಿಯ ಗರ್ಭದೊಳಗಿನ ಪಿಂಡವನ್ನು, ತನ್ನ ವಜ್ರಾಯುಧದಿಂದ ಚೂರುಚೂರಾಗಿ ಕತ್ತರಿಸಿ ಹಾಕಿದನು. ಆದರೆ ಕಶ್ಯಪನ ಅನುಗ್ರಹದಿಂದ ಪಿಂಡಖಂಡಗಳು ಸಾಯದೆ, ದಿತಿಯ ಗರ್ಭದೊಳಗಿಂದ ಹುಟ್ಟಿ ಮರುತ್ತುಗಳಾಗಿ, ಇಂದ್ರಭಕ್ತಿಯುಳ್ಳವರಾಗಿ ಅವನನ್ನೇ ಸೇವಿಸಲು ಹೊರಟುಹೋದರು.

ಇದರಿಂದ ನಿರಾಶಳಾದ ದಿತಿ, ತನಗೆ ಪುತ್ರದಾನ ಮಾಡಬೇಕೆಂದು ಕಶ್ಯಪನನ್ನು ಮತ್ತೆ ಪ್ರಾರ್ಥಿಸಿದಳು. ಆಗ ಕಶ್ಯಪನು ಮೊದಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡುವಂತೆ ಅವಳಿಗೆ ಸಲಹೆ ಮಾಡಿದನು. ದಿತಿ ಹಾಗೆಯೇ ತಪಸ್ಸು ಮಾಡಿ, ಅನಂತರ ಕಶ್ಯಪನ ಅನುಗ್ರಹದಿಂದ ಗರ್ಭಿಣಿಯಾಗಿ ವಜ್ರಕಾಯನಾದ ಒಬ್ಬ ಮಗನನ್ನು ಪ್ರಸವಿಸಿದಳು. ಅವನ ವಜ್ರಕಾಯವನ್ನು ನೋಡಿ ತಾಯಿತಂದೆಯರು ಅವನಿಗೆ ವಜ್ರಾಂಗನೆಂದು ನಾಮಕರಣ ಮಾಡಿದರು.

ವಿಶೇಷವೇನೆಂದರೆ, ವಜ್ರಾಂಗನು ಹುಟ್ಟಿದಾಗ ಉಲ್ಕಾಪಾತಗಳೂ, ಭೂಕಂಪಗಳೂ, ಬಿರುಗಾಳಿಗಳೂ ಲೋಕವನ್ನು ನಡುಗಿಸಿದುವು. ದೇವತೆಗಳು ಹೆದರಿ ನಡುಗಿದರು. ದಿತಿ ವಜ್ರಾಂಗನನ್ನು ಅತ್ಯಂತ ಕೊಂಡಾಟದಿಂದ ಬೆಳೆಸಿದಳು. ಅವನು ದೊಡ್ಡವನಾದ ಮೇಲೆ, ದಿತಿ ಅವನನ್ನು ನೋಡಿ, "ಕಂದಾ, ದೇವತೆಗಳು ನನ್ನನ್ನು ಬಹಳ ದುಃಖಕ್ಕೆ ಈಡು ಮಾಡಿದ್ದಾರಪ್ಪಾ. ಅವರು ನಿನ್ನ ಅಣ್ಣಂದಿರಾದ ಹಿರಣ್ಯಕಶಿಪು, ಹಿರಣ್ಯಾಕ್ಷರನ್ನು ವಿಷ್ಣುವಿನ ಕೈಯಲ್ಲಿ ಕೊಲ್ಲಿಸಿದರು. ಮರುತ್ತುಗಳು ನನ್ನ ಗರ್ಭದಲ್ಲಿರುವಾಗ ದೇವೇಂದ್ರನು ನನ್ನ ಗರ್ಭವನ್ನು ಕತ್ತರಿಸಿದನು. ಅವನ ಸಂಪರ್ಕದಿಂದ ಅವರು ಇಂದ್ರ ಪಕ್ಷಪಾತಿಗಳಾದರು. ನೀನು ದೇವತೆಗಳ ಮೇಲೆ ಯುದ್ಧಕ್ಕೆ ಹೋಗಿ ಹತಮಾಡಿ, ನನ್ನ ಹಗೆಯನ್ನು ತೀರಿಸಬೇಕು. ಅದನ್ನೇ ನಿನ್ನ ಜೀವಿತದ ಗುರಿಯಾಗಿ ಹಿಡಿ" ಎಂದಳು.

ತಾಯಿಯ ಮಾತು ಕೇಳಿದ ಮೇಲೆ ವಜ್ರಾಂಗನು ರಾಕ್ಷಸ ಸೈನ್ಯವನ್ನು ಕೂಡಹಾಕಿಕೊಂಡು ರಣಭೇರಿ ಮೊಳಗಿಸುತ್ತ ದೇವೇಂದ್ರನ ಪಟ್ಟಣವನ್ನು ಮುತ್ತಿದನು. ತಡೆದ ದೇವ ಸೈನ್ಯವನ್ನೆಲ್ಲಾ ಹೊಡೆದೋಡಿಸಿ ಮುಂದೆ ಹೋಗಿ ದೇವೇಂದ್ರನನ್ನು ಹಿಡಿದು ಬಂದೀ ಮಾಡಿ, ಸ್ವರ್ಗವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಈ ಸಮಾಚಾರವನ್ನು ಕೇಳಿ ದಿತಿಗೆ ಪರಮಾನಂದವಾಯಿತು.

ನಿರಾಧಾರಿಗಳಾದ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ತಮಗಾದ ಅಪಜಯವನ್ನು ಮೊರೆಯಿಟ್ಟುಕೊಂಡರು. ಬ್ರಹ್ಮನು ಅವರು ಹೇಳಿದುದನ್ನೆಲ್ಲಾ ಕೇಳಿ, ಕಶ್ಯಪನನ್ನು ತನ್ನೊಂದಿಗೆ ಕರೆದುಕೊಂಡು

ವಜ್ರಾಂಗನ ಬಳಿಗೆ ಹೋಗಿ, ಒಳ್ಳೆಯ ಮಾತು ಗಳಿಂದ, ಇಂದ್ರನನ್ನು ಬಿಡಿಸಿ, ಸ್ವರ್ಗವನ್ನು ದೇವತೆ ಗಳಿಗೆ ಬಿಟ್ಟುಕೊಡುವಂತೆ ಹಿತಬೋಧೆಗಳನ್ನು ಮಾಡಿದನು.

"ನಾನು ರಾಜ್ಯದ ಆಶೆಯಿಂದಾಗಲಿ, ಧನದಾಶೆ ಯಿಂದಾಗಲಿ ದೇವತೆಗಳೊಂದಿಗೆ ಯುದ್ಧ ಮಾಡ ಲಿಲ್ಲ. ಇಂದ್ರನು ನನ್ನ ತಾಯಿಯ ಮನಸ್ಸನ್ನು ಕ್ಷೋಭೆಗೊಳಿಸಿದ್ದಾನೆ. ಅವಳ ಗರ್ಭವನ್ನು ತುಂಡು ತುಂಡು ಮಾಡಿದನು. ಇವನು ತನ್ನ ತಾಯಿಯನ್ನು ದುಃಖಪಡಿಸದಿರುತ್ತಿದ್ದರೆ, ನನ್ನಿಂದ ಈ ಕಷ್ಟಕ್ಕೆ ಬೀಳುತ್ತಿರಲಿಲ್ಲ" ಎಂದು ಬ್ರಹ್ಮನೊಂದಿಗೆ ಹೇಳಿ ದನು ವಜ್ರಾಂಗ.

ಈ ಮಾತು ಕೇಳಿ ಬ್ರಹ್ಮನು ಸಂತೋಷಪಟ್ಟು ವರ ಕೇಳುವಂತೆ ವಜ್ರಾಂಗನೊಂದಿಗೆ ಹೇಳಿದನು.

"ನನಗೆ ಪರಬ್ರಹ್ಮ ಸ್ವರೂಪವೂ, ಭೂತ ದಯೆಯೂ ಹೊರತು ಇನ್ನೇನೂ ಬೇಡ. ಅವೆರ ಡನ್ನು ಮಾತ್ರ ನನಗೆ ಅನುಗ್ರಹಿಸಬೇಕು" ಎಂದನು ವಜ್ರಾಂಗ.

ಬ್ರಹ್ಮನು ಮತ್ತಿಷ್ಟು ಸಂತೋಷಗೊಂಡು, ಕೇಳಿದ ವರವನ್ನು ಕೊಟ್ಟು, ವರಾಂಗಿ ಎಂಬ ಪರಮ ಸುಂದರಿಯೊಂದಿಗೆ ಅವನಿಗೆ ಮದುವೆ ಮಾಡಿಸಿ, ಕಶ್ಯಪನೇ ಮೊದಲಾದವರೊಂದಿಗೆ ಹೊರಟುಹೋದನು. ವಜ್ರಾಂಗನು ತನ್ನ ಪಟ್ಟಣಕ್ಕೆ ಹಿಂದಿರುಗಿ ದೊಡ್ಡ ಶಿವಭಕ್ತನಾಗಿ ಸಾತ್ವಿಕ ಗುಣ ದವನಾಗಿ ಈಶ್ವರ ಪೂಜೆ ಮಾಡುತ್ತಾ ಜೀವಿಸ ತೊಡಗಿದನು.

ಸ್ವಲ್ಪಕಾಲ ಕಳೆದ ಮೇಲೆ, ತನ್ನ ಪತ್ನಿ ವರಾಂಗಿ ಮಾಡುವ ಸೇವೆಗಳಿಗೆ ಮೆಚ್ಚಿ ವಜ್ರಾಂಗನು ಏನು ವರ ಬೇಕೆಂದು ಅವಳನ್ನು ಕೇಳಿದನು.

"ಮಹಾಬಲ ಪರಾಕ್ರಮಶಾಲಿಯಾದ, ನಿಮ್ಮ ಹಾಗೆ ದೇವೇಂದ್ರನನ್ನೂ, ದೇವತೆಗಳನ್ನೂ ಜಯಿಸು ವಂಥವನಾದ, ತನ್ನ ಕೀರ್ತಿಯನ್ನು ಪ್ರಪಂಚದಲ್ಲಿ ಶಾಶ್ವತವಾಗಿ ನಿಲ್ಲಿಸುವಂಥವನಾದ ಮಗನು ನನಗೆ ಬೇಕು" ಎಂದು ವರ ಕೇಳಿದಳು ವರಾಂಗಿ.

ಹೆಂಡತಿ ಹೀಗೆ ವರವನ್ನು ಕೇಳಿದ ಕೂಡಲೇ ವಜ್ರಾಂಗನು ತುಂಬಾ ನೊಂದುಕೊಂಡನು. ವರಾಂಗಿ ಸ್ತ್ರೀ ಸಹಜವಾದ ಚಪಲಚಿತ್ತದಿಂದ ದೇವತೆಗಳನ್ನು ವಿರೋಧಿಸುವ ಮಗನನ್ನು ಕೇಳುತ್ತಾಳೆ. ಅಂತಹವ ನನ್ನು ಮಹಾವಿಷ್ಣು ಬಹಳ ಕಾಲ ಬದುಕಲು ಬಿಡಲಾರ. ಆದರೆ ಕೊಟ್ಟ ಮಾತು ತಪ್ಪಿಸಲು ವಜ್ರಾಂಗನಿಗೆ ಇಷ್ಟವಿರಲಿಲ್ಲ. ಆದುದರಿಂದ ಅವನು ಹೆಂಡತಿಗೆ ಹಾಗೇ ಆಗಲೆಂದು ಹೇಳಿ, ಬ್ರಹ್ಮನನ್ನು ಕುರಿತು ಬಹಳ ಕಾಲದವರೆಗೆ ಘೋರ ತಪಸ್ಸು ಮಾಡಿದನು.





# ಶಿವಪುರಾಣ

ಘೋರ ತಪಸ್ಸಿನಲ್ಲಿ ಮುಳುಗಿದ ವಜ್ರಾಂಗನ ಮುಂದೆ ಒಂದು ದಿನ ಬ್ರಹ್ಮನು ಪ್ರತ್ಯಕ್ಷನಾಗಿ, "ನಿನ್ನ ತಪಸ್ಸಿಗೆ ಮೆಚ್ಚಿದೆನು. ಇನ್ನು ತಪಸ್ಸು ಸಾಕು. ಏನು ವರ ಬೇಕೆಂಬುದನ್ನು ಕೇಳು" ಎಂದನು.

"ಮಹಾದೇವಾ, ನನ್ನ ಅರ್ಧಾಂಗಿನಿಯಾದವಳು ದೇವತೆಗಳನ್ನು ಜಯಿಸತಕ್ಕ ಮಗನು ಬೇಕೆನ್ನುತ್ತಾಳೆ. ಅವಳಿಗೆ ಅಂತಹ ಮಗನು ಹುಟ್ಟುವಂತೆ ವರ ಕೊಡು" ಎಂದು ಕೇಳಿದನು ವಜ್ರಾಂಗ.

"ಹಾಗೇಯೇ ಆಗಲಿ" ಎಂದು ಬ್ರಹ್ಮನು ವರ ಕೊಟ್ಟು ಅಂತರ್ಧಾನನಾದನು.

ವಜ್ರಾಂಗನು ಮನೆಗೆ ಹಿಂದಿರುಗಿ ಬಂದು, ಬ್ರಹ್ಮನು ತನಗೆ ವರ ಕೊಟ್ಟ ಸಂಗತಿಯನ್ನು ಹೆಂಡತಿಯೊಂದಿಗೆ ಹೇಳಿದನು.

ಆಮೇಲೆ ಬೇಗದಲ್ಲೇ ಅವನ ಹೆಂಡತಿಯಾದ ವರಾಂಗಿ ಗರ್ಭವತಿಯಾಗಿ, ಹತ್ತನೆಯ ತಿಂಗಳು ಬಂದ ಮೇಲೆ ಒಂದು ದಿನ ಬೆಳಂಜಾಮದ ವೇಳೆಯಲ್ಲಿ ಒಬ್ಬ ಮಗನನ್ನು ಹೆತ್ತಳು. ಆ ಮಗನು ತ್ರಿಲೋಕ ಶೂರನಾಗುವನೆಂಬುದನ್ನು ಸೂಚಿಸುವಂತೆ, ಅವನು ಹುಟ್ಟಿದ ಕೂಡಲೇ ಭೂಮಿ ಕಂಪಿಸಿತು. ಎಲ್ಲಾ ಕಡೆಗಳಿಂದಲೂ ಅಗ್ನಿಜ್ವಾಲೆಗಳೆದ್ದುವು. ಸುಳಿಗಾಳಿ ಬೀಸಿ ದೊಡ್ಡ ದೊಡ್ಡ ಮರಗಳು ಮಗುಚಿ ಬಿದ್ದುವು. ಹದ್ದುಗಳೂ, ಗೂಗೆಗಳೂ ಕೆಟ್ಟದನಿಯಿಂದ ಅರಚಿದುವು. ಹಚ್ಚಹಗಲೇ ಉಲ್ಕೆಗಳು ಉದುರಿದುವು. ಇಂತಹ ಉತ್ಪಾತಗಳನ್ನು ನೋಡಿ ಜನರೆಲ್ಲಾ ಹೆದರಿ ನಡುಗಿದರು.

ವಜ್ರಾಂಗನೂ, ವರಾಂಗಿಯೂ ತಮ್ಮ ಮಗನಿಗೆ ತಾರಕ ಎಂದು ಹೆಸರಿಟ್ಟರು. ಬಹಳ ಮುದ್ದಿನಿಂದ ಬೆಳೆಸತೊಡಗಿದರು.

ತಾರಕನು ದಿನದಿಂದ ದಿನಕ್ಕೆ ಬಲಿಷ್ಠನಾಗುತ್ತ, ಬೆಳೆಯುತ್ತ, ಪರ್ವತಾಕಾರ ತಾಳುತ್ತ, ನೋಡುವವರಿಗೆ ಭಯ ಹುಟ್ಟುವಂತೆ ಕಾಣುತ್ತಿದ್ದನು.

ಒಂದು ದಿನ ವರಾಂಗಿ ತಾರಕನೊಂದಿಗೆ, "ಕಂದಾ, ನೀನು ಏಕಾಂತ ಪ್ರದೇಶಕ್ಕೆ ಹೋಗಿ ಬ್ರಹ್ಮನನ್ನು ಧ್ಯಾನಿಸಿ ತಪಸ್ಸು ಮಾಡಿ, ಮೂರು ಲೋಕಗಳನ್ನೂ

೪. ತಾರಕಾಸುರನ ವಿಜೃಂಭಣೆ



ಜಯಿಸುವ ಹಾಗೆ ವರ ಕೇಳಿ ಪಡೆಯಬೇಕು. ಬರೇ ದೇಹಶಕ್ತಿಯಿಂದ ದೊಡ್ಡ ಪ್ರಯೋಜನವಿಲ್ಲ"ಎಂದಳು.

ತಾರಕನು ಅದಕ್ಕೆ ಒಪ್ಪಿಕೊಂಡು, ಒಂದು ನಿರ್ಜನ ಪ್ರದೇಶಕ್ಕೆ ಹೋಗಿ, ಅಲ್ಲಿ ತಪಸ್ಸಿಗೆ ಕುಳಿತನು. ದಿನದಿಂದ ದಿನಕ್ಕೆ ಅವನ ತಪಸ್ಸು ದಾರುಣವಾಗುತ್ತಾ ಹೋಯಿತು. ಆಗ ಅವನ ಶರೀರದಿಂದ ಹುಟ್ಟಿದ ಬೇಗೆಯಿಂದ ಮೂರು ಲೋಕಗಳೂ ಕಾವೇರಿ ಸುಟ್ಟು ಹೋಗುವಂತೆ ಕಾಣ ತೊಡಗಿತು.

ಆಗ ದೇವತೆಗಳೂ ಋಷಿಗಳೂ ಬ್ರಹ್ಮನ ಬಳಿಗೆ ಹೋಗಿ, "ಲೋಕಪಿತಾ, ಆ ತಾರಕನ ತಪಸ್ಸಿನ ಬೇಗೆಗೆ ಪ್ರಪಂಚವು ಉಳಿಯಲಾರದು, ನೀನು ಹೋಗಿ ಅವನ ತಪಸ್ಸನ್ನು ನಿಲ್ಲಿಸಬೇಕು" ಎಂದು ಕೇಳಿಕೊಂಡರು.

ಬ್ರಹ್ಮನು ಸರಸ್ವತೀ ಸಮೇತನಾಗಿ ಹಂಸದ ಮೇಲೇರಿಕೊಂಡು ತಾರಕನ ಬಳಿಗೆ ಬಂದು, "ತಾರಕಾ, ನಿನ್ನ ತಪಸ್ಸಿಗೆ ಮೆಚ್ಚಿದೆನು. ತಪಸ್ಸನ್ನು ನಿಲ್ಲಿಸಿ, ಬೇಕಾದ ವರವನ್ನು ಕೇಳಿಕೋ" ಎಂದನು.

ತಾರಕನು ಪರಮಾನಂದದಿಂದ ಬ್ರಹ್ಮನಿಗೆ ನಮಸ್ಕಾರ ಮಾಡಿ, "ಓ ಬ್ರಹ್ಮದೇವಾ! ನೀನು ವರ ಕೊಡುವೆನೆಂದು ಹೇಳಿದ ಕೂಡಲೇ ನನ್ನ ತಪಸ್ಸು ಫಲಿಸಿತು. ನನಗೆ ಮೂರು ಲೋಕಗಳನ್ನೂ ಜಯಿಸುವ ಶಕ್ತಿಯನ್ನು ಕೊಡು. ಶಿವನಿಂದ ಹುಟ್ಟಿದವನ ಹೊರತು ಬೇರೆ ಯಾರಿಂದಲೂ ನನಗೆ ಮರಣ ಬರಕೂಡದೆಂಬ ಇನ್ನೊಂದು ವರವೂ ಬೇಕು. ನನಗೆ ಬೇಕಾದುದು ಈ ಎರಡು ವರಗಳೇ" ಎಂದು ಕೇಳಿಕೊಂಡನು.

ಬ್ರಹ್ಮನು ತಾರಕನಿಗೆ ಅವನು ಕೇಳಿದ ಎರಡು ವರಗಳನ್ನೂ ಕೊಟ್ಟು, ತನ್ನ ಲೋಕಕ್ಕೆ ಹೊರಟು ಹೋದನು. ತಾರಕನು ತನ್ನ ರಾಜಧಾನಿಯಾದ ಶೋಣಿತ ಪಟ್ಟಣಕ್ಕೆ ಹಿಂದಿರುಗಿ ಬಂದು, ತಾನು ಬ್ರಹ್ಮನಿಂದ ಪಡೆದ ವರಗಳ ಸಮಾಚಾರವನ್ನು ತನ್ನ ತಾಯಿಯೊಂದಿಗೂ ಗುರುವಾದ ಶುಕ್ರಾಚಾರ್ಯನೊಂದಿಗೂ ಹೇಳಿದನು. ತಾಯಿಯ ಅಪೇಕ್ಷೆಯಂತೆ ಇನ್ನು ತಾನು ತ್ರಿಲೋಕ ದಿಗ್ವಿಜಯಕ್ಕೆ ಹೊರಡಲು ಒಳ್ಳೆಯ ಮುಹೂರ್ತ ನೋಡಿ ಹೇಳುವಂತೆ ತಾರಕನು ಶುಕ್ರಾಚಾರ್ಯನನ್ನು ಕೇಳಿಕೊಂಡನು.

ಶುಕ್ರಾಚಾರ್ಯನು ಚೆನ್ನಾಗಿ ಪರಿಶೀಲಿಸಿ ತಾರಕನು ದಿಗ್ವಿಜಯಕ್ಕೆ ಹೊರಡಲು ಮುಹೂರ್ತ ದಿನವನ್ನು ನಿಶ್ಚಯಿಸಿ ಹೇಳಿದನು. ಆ ದಿನದಲ್ಲಿ ತಾರಕನು ತನ್ನ ಚತುರಂಗ ಬಲಗಳೊಂದಿಗೆ ಹೊರಟು, ಮೊದಲು ಸ್ವರ್ಗಕ್ಕೆ ದಾಳಿಯಿಟ್ಟನು. ದೇವತೆಗಳು ಬಹುಬೇಗದಲ್ಲೇ ಸೋತು ಅವನಿಗೆ ಶರಣಾದರು. ತಾರಕನು ದೇವೇಂದ್ರನಿಂದ ಕಾಣಿಕೆಗಳನ್ನು ಪಡೆದು ಕೊಂಡು, ಅವನ ಸಿಂಹಾಸನವನ್ನು ತನಗೆ ಸ್ವಾಧೀನ ಪಡಿಸಿಕೊಂಡನು.

ಅಲ್ಲಿಂದ ತಾರಕನು ವರುಣನ ಮೇಲೆ ಯುದ್ಧಕ್ಕೆ ಹೋಗಿ ಜಯಿಸಿ, ಅವನ ರಥಾಶ್ವಗಳನ್ನು ಕಾಣಿಕೆಗಳಾಗಿ ಪಡೆದುಕೊಂಡು, ಅಲ್ಲಿಂದ ಯಮನ ಮೇಲೆ ಹೊರಟನು.

ಹೀಗೆ ಅವನಿಂದ ಒಂದೊಂದು ದಿಕ್ಪಾಲಕರೂ ಸೋತು ಸೋತು ಶರಣಾಗತರಾದರು. ದಿಕ್ಪಾಲಕರಿಂದ ಅಪರಿಮಿತವಾದ ಕಾಣಿಕೆಗಳನ್ನು ಪಡೆದು, ತಾರಕನು ತನ್ನ ರಾಜಧಾನಿಗೆ ಬಂದು ಅತಿವೈಭವದಿಂದ ಇರತೊಡಗಿದನು.

ಒಂದು ದಿನ ನಾರದನು ತಾರಕನನ್ನು ನೋಡಲು ಬಂದನು. ತಾರಕನು ಅವನಿಗೆ ಇದಿರಾಗಿ ಹೋಗಿ ಪೂಜಿಸಿ ಕರೆದುಕೊಂಡು ಬಂದು ತನ್ನ ಪಕ್ಕದಲ್ಲೇ ಸಿಂಹಾಸನದ ಮೇಲೆ ಕೂಡಿಸಿ, "ತ್ರಿಲೋಕ ಸಂಚಾರಿಯಾದ ನಾರದ! ನಿನ್ನ ದಯದಿಂದಲೇ ದಿಕ್ಕುಗಳೆನ್ನೆಲ್ಲಾ ಜಯಿಸಿಬಿಟ್ಟೆನು! ತ್ರಿಲೋಕ ಚಕ್ರವರ್ತಿಯಾದೆನು" ಎಂದನು.

ಆ ಮಾತು ಕೇಳಿ ನಾರದನು, "ತಾರಕಾ, ಲೋಕ ಪಿತಾಮಹನಾದ ಬ್ರಹ್ಮನಿಂದ ವರಗಳನ್ನು ಪಡೆದಿರುವ ನೀನು, ಹತ್ತು ದಿಕ್ಕುಗಳನ್ನೂ ಜಯಿಸಿದುದರಲ್ಲಿ ಅಂತಹ ವಿಶೇಷವೇನೂ ಇಲ್ಲ. ನಿನ್ನನ್ನು ಕೊಲ್ಲುವವನೂ ಸಹಾ ಯಾರೂ ಇಲ್ಲವೆಂಬುದೂ ತಿಳಿದ ವಿಷಯ. ನೀನು ಪರಮಶಿವನ ಔರಸ ಪುತ್ರನ ಹೊರತು ಬೇರೆ ಯಾರಿದಲೂ ಸಾವು ಬಾರದಂತೆ ವರ ಪಡೆದಿರುವಿ. ಶಿವನೇನೋ ವೈರಾಗ್ಯದಿಂದ ತಪಸ್ಸು ಮಾಡಿಕೊಂಡಿದ್ದಾನೆ. ಆದುದರಿಂದ ನೀನು ನಿಜವಾಗಿಯೂ ತ್ರಿಲೋಕ ಶೂರನೆಂಬ ಕೀರ್ತಿಗಳಿಸ ಬೇಕಾದರೆ ಹೋಗಿ ವೈಕುಂಠವನ್ನು ಜಯಿಸಿ ಬರಬೇಕು" ಎಂದನು.

ತಾರಕನು ನಾರದನ ಸಲಹೆಯನ್ನು ನಿಜವೆಂದು ಅನುಮೋದಿಸಿ, ತಡ ಮಾಡದೆ ತನ್ನ ಸೇನೆಯನ್ನು ಸೇರಿಸಿಕೊಂಡು ವೈಕುಂಠಕ್ಕೆ ಹೋಗಿ ರಣಭೇರಿ



ಮೊಳಗಿಸಿದನು. ತಾರಕನು ಪಡೆದ ವರಗಳ ಸಂಗತಿಯನ್ನು ತಿಳಿದಿದ್ದ ವಿಷ್ಣು, ಅವನನ್ನು ಕೊಲ್ಲಲು ಸಾಧ್ಯವಿಲ್ಲವೆಂದು ತಿಳಿದು, ತಾರಕನ ಬಳಿಗೆ ಬಂದು ಸವಿಮಾತುಗಳಿಂದ ಅವನನ್ನು ಸ್ನೇಹ ಮಾಡಿಕೊಂಡು ಸಮಾಧಾನಪಡಿಸಿ ಕಳುಹಿಸಿಬಿಟ್ಟನು. ವಿಷ್ಣುವಿನ ಮಾಯದ ಮಾತುಗಳಿಂದ ಅವನು ತನ್ನ ಬಲವನ್ನು ತನಗೆ ಕೊಟ್ಟನೆಂದುಕೊಂಡು ತಾರಕನು ಬಹಳ ಹೆಮ್ಮೆಯಿಂದಲೂ ತೃಪ್ತಿಯಿಂದಲೂ ಉಬ್ಬಿಹಿಂದಿರುಗಿದನು.

ಅತ್ತ ಕೈಲಾಸದಲ್ಲಿ ಪಾರ್ವತಿ ಮಾಡುವ ಸೇವಾ ಸಪರ್ಯೆಗಳಿಗೆ ಶಿವನು ಒಪ್ಪಿಕೊಂಡುದರಿಂದ ಹಿಮವಂತನು ಸಂತೋಷಗೊಂಡು, ಪಾರ್ವತಿಯನ್ನು ಅವಳ ಸಖಿಯರೊಂದಿಗೆ ಕರೆದುಕೊಂಡು ಬಂದು ಶಿವನೊಂದಿಗೆ, "ದೇವಾ, ಪಾರ್ವತಿ ಇವಳೇ. ನಿನ್ನ ಸೇವೆಗಾಗಿ ಬಂದಿದ್ದಾಳೆ. ಬೇಕಾದ ರೀತಿಯಲ್ಲಿ ಸೇವೆ ಮಾಡಿಸಿಕೋ, ಚಿಕ್ಕ ಹುಡುಗಿಯಾದ ಇವಳು ಹಾಗೇ



ನಾದರೂ ತಿಳಿಯದೆ ತಪ್ಪು ಮಾಡಿದಲ್ಲಿ ದಯವಿಟ್ಟು ಕ್ಷಮಿಸಿಕೊಳ್ಳಬೇಕು" ಎಂದು ಹೇಳಿ ಪಾರ್ವತಿಯನ್ನು ಅಲ್ಲಿ ಬಿಟ್ಟು, ಮೇನಕೆಯೊಂದಿಗೆ ತನ್ನ ಮನೆಗೆ ಹೊರಟುಹೋದನು.

ಅಂದಿನಿಂದ ಪಾರ್ವತಿ ಪ್ರತಿದಿನವೂ ಉದಯ ಕಾಲದಿಂದ ಮಧ್ಯಾಹ್ನದ ವರೆಗೂ ಶಿವನಿಗೆ ಸಪರ್ಯೆ ಮಾಡುತ್ತಿದ್ದಳು. ಅವನಿಗೆ ಬೇಕಾದ ಪುಷ್ಪಗಳು, ಫಲಗಳು, ನೀರು ಮುಂತಾದುವನ್ನು ತಂದಿಟ್ಟು ಮನೆಗೆ ಹೋಗಿ, ತಾನು ಶಿವನಿಗೆ ಹೇಗೆ ಸೇವೆ ಮಾಡಿದೆನೆಂಬುದನ್ನು ತಂದೆ ತಾಯಿಗಳೊಂದಿಗೆ ಹೇಳುವಳು.

ಶೋಣಿತಪುರಕ್ಕೆ ತಿರುಗಿ ಬಂದ ತಾರಕನು, ಸುಮ್ಮನಿರಲಾಗದೆ, ಸೈನ್ಯದೊಂದಿಗೆ ಸ್ವರ್ಗಕ್ಕೆ ಹೋಗಿ, ದೇವೇಂದ್ರನ ಸಿಂಹಾಸನದ ಮೇಲೆ ಕುಳಿತುಕೊಂಡು, ದೇವತೆಗಳಿಂದ ನಾನಾ ಚಾಕರಿಗಳನ್ನು ಮಾಡಿಸುತ್ತ ಕಾಡಿಸತೊಡಗಿದನು. ಆದರಿಂದ ಲೋಕಗಳೂ ಬಾಧೆಗೊಳಗಾದುವು. ದೇವತೆಗಳನ್ನು ಆರಾಧಿಸುವ ಋಷಿಗಳ ಯಜ್ಞ ಯಾಗಗಳಿಗೂ ತಾರಕನಿಂದ ವಿಘ್ನ ಬರಲು ಪ್ರಾರಂಭವಾಯಿತು. ತಪಸ್ವಿಗಳ ತಪಸ್ಸೂ ಸಾಗದಾಯಿತು.

ಈ ಕಷ್ಟ ಸಹಿಸದೆ ದೇವೇಂದ್ರನೇ ಮೊದಲಾದ ವರು ಬ್ರಹ್ಮನ ಬಳಿಗೆ ಹೋಗಿ, ತಾರಕಾಸುರನು ವರ ಪಡೆದ ಗರ್ವದಿಂದ ತಾವು ನಾನಾ ಹೀನ ಹಿಂಸೆಗಳಿಂದ ನೊಂದುಹೋದ ಸಂಗತಿಯನ್ನು ಮೊರೆಯಿಟ್ಟುಕೊಂಡರು.

ಬ್ರಹ್ಮನು ತಾರಕನ ಬಳಿಗೆ ಹೋಗಿ, "ತಾರಕಾ, ನೀನು ಮೂರು ಲೋಕಗಳನ್ನೂ ಜಯಿಸಿದವನು ತಾನೆ ? ನೀನು ನಿನ್ನ ಶೋಣಿತ ಪುರದಲ್ಲಿದ್ದೇ ಲೋಕ ಗಳನ್ನೆಲ್ಲಾ ಪಾಲಿಸಿಕೊಂಡಿರು. ಸ್ವರ್ಗಲೋಕ ದೇವೇಂದ್ರನ ಸ್ವಾಧೀನದಲ್ಲೇ ಇರಲಿ. ನಿನಗೂ ದೇವತೆಗಳಿಗೂ ನಡುವೆ ವಿರೋಧ ಬೇಡಪ್ಪ" ಎಂದು ಹಿತಬೋಧನೆ ಮಾಡಿದನು.

ತಾರಕನು ಬ್ರಹ್ಮನ ಮಾತಿಗೆ ಗೌರವ ಕೊಟ್ಟು, ಸ್ವರ್ಗವನ್ನು ಇಂದ್ರನಿಗೆ ಬಿಟ್ಟುಕೊಟ್ಟನು. ದಿಕ್ಪಾಲಕ ರಿಗೂ ಅವರವರ ದಿಕ್ಕುಗಳು ಸಿಕ್ಕಿದುವು. ತಾರಕನು ಶೋಣಿತ ಪುರದಲ್ಲಿದ್ದೇ ಮೂರು ಲೋಕಗಳಿಂದ ಕಪ್ಪಕಾಣಿಕೆ ತೆಗೆದುಕೊಳ್ಳುತ್ತ, ಚಕ್ರವರ್ತಿಯಾಗಿದ್ದನು. ಈಶ್ವರಾರಾಧನೆಯಲ್ಲಿ ತನ್ನ ಹೊತ್ತನ್ನು ಕಳೆಯು ತ್ತಿದ್ದನು ತಾರಕಾಸುರ.

ಇಂದ್ರನಿಗೆ ಮನಸ್ಸಿನಲ್ಲಿ ಕೊರಗು ತುಂಬಿಕೊಂಡೇ ಇದ್ದಿತು. ತಾನು ಸ್ವರ್ಗದ ಅಧಿಕಾರದಲ್ಲಿದ್ದರೂ ಮತ್ತೊಬ್ಬನ ಅಧಿಕಾರದ ಕೆಳಗೇ ಪಾಲಿಸಿಕೊಂಡಿರ ಬೇಕಾದ ಸ್ಥಿತಿ ಬಂದುದರಿಂದ ಬಹಳ ಸಂಕಟ ಪಡುತ್ತಿದ್ದನು.

ಒಂದು ದಿನ ಇಂದ್ರನು ತನ್ನ ಗುರುವಾದ ಬೃಹಸ್ಪತಿಯನ್ನು ಕರೆಯಿಸಿ, "ಗುರುದೇವಾ, ತ್ರಿಲೋಕಾಧಿಪತಿಯಾದ ನಾನು, ತಾರಕನ ಕೈಕೆಳಗಿನ



ಸೇವಕನಾಗಿರುವುದು ದೊಡ್ಡ ಅವಮಾನವಾಗಿದೆ. ಇಂತಹ ಅವಮಾನದಿಂದ ಬದುಕುವುದಕ್ಕಿಂತ ಸಾಯುವುದೇ ಮೇಲು. ನಮಗೆ ಸಾವು ಬಾರದು. ಇದಕ್ಕೆ ಪರಿಹಾರವೆಂದರೆ ತಾರಕನ ಸಾವೇ. ಆಲೋಚನೆಯಲ್ಲಿ ನೀವು ಬಹಳ ಗಟ್ಟಿಗರು. ಈ ತಾರಕನು ಸಾಯುವ ಉಪಾಯವೇನಾದರೂ ಇದ್ದರೆ ಆಲೋಚಿಸಿ ಹೇಳಬೇಕು" ಎಂದು ಕೇಳಿ ಕೊಂಡನು.

"ನಾವು ಬ್ರಹ್ಮನನ್ನೇ ಆಲೋಚನೆ ಕೇಳುವುದು ಒಳ್ಳೆಯದು. ತಾರಕನ ವಿಜೃಂಭಣೆಗೆ ಅವನೇ ಕಾರಣ" ಎಂದನು ಬೃಹಸ್ಪತಿ.

ಮತ್ತೆ ಎಲ್ಲರೂ ಕೂಡಿ ಬ್ರಹ್ಮನ ಬಳಿಗೆ ಹೋಗಿ ತಾರಕನು ಸಾಯುವ ಉಪಾಯವನ್ನು ಹೇಳ ಬೇಕೆಂದು ಅವನನ್ನು ಕೇಳಿದರು.

"ಶಿವನಿಗೆ ಹುಟ್ಟಿದ ಪುತ್ರನ ಹೊರತು ಬೇರೆ ಯಾರಿಂದಲೂ ತಾರಕನಿಗೆ ಸಾವಿಲ್ಲ. ನಾನು ಅವನಿಗೆ ಹಾಗೆಯೇ ವರವನ್ನು ಕೊಟ್ಟಿದ್ದೇನೆ. ಸತೀದೇವಿಯ ಸಾವಿನಿಂದ ಮಹಾ ವೈರಾಗ್ಯ ತಾಳಿದ ಶಿವನು ಕೈಲಾಸ ಪರ್ವತದ ಮೇಲೆ ತಪಸ್ಸು ಮಾಡಿಕೊಂಡಿದ್ದಾನೆ. ಆ ಸತೀದೇವಿಯೇ ಹಿಮವಂತನ ಕುಮಾರಿಯಾಗಿ ಹುಟ್ಟಿ, ಶಿವನಿಗೆ ಪರಿಚರ್ಯೆ ಮಾಡಿಕೊಂಡಿದ್ದಾಳೆ. ಅವಳು ತನ್ನ ಮನಸ್ಸಿನಲ್ಲಿ ಶಿವನನ್ನೇ ಗಂಡನನ್ನಾಗಿ ವರಿಸಿಕೊಂಡಿದ್ದಾಳೆ. ನೀವು ಹೇಗಾದರೂ ಶಿವನಿಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡಿರಿ. ಆಮೇಲೆ ಅವರಿಬ್ಬರೊಳಗೆ ವಿವಾಹವನ್ನೂ ನಡೆಯಿಸಿರಿ. ಅಷ್ಟು ಮಾಡಿಬಿಟ್ಟರೆ, ಶಿವಪಾರ್ವತಿಯರಿಗೆ ಹುಟ್ಟುವ ಮಗನು ತಾರಕನನ್ನು ಕೊಲ್ಲುತ್ತಾನೆ. ತಾರಕನ ಸಂಹಾರಕ್ಕೆ ಬೇರೆ ಉಪಾಯವಾವುದೂ ಇಲ್ಲ" ಎಂದು ಹೇಳಿ ಬ್ರಹ್ಮನು ದೇವತೆಗಳನ್ನು ಕಳುಹಿಸಿಕೊಟ್ಟನು. ಬ್ರಹ್ಮನು ಹೇಳಿದ ಮಾತು ಎಲ್ಲರಿಗೂ ಸಂತೋಷವನ್ನುಂಟುಮಾಡಿತು. ಇನ್ನು ಶಿವನಂತಹ ಮಹಾ ವಿರಾಗಿಗೆ ಮೋಹ ಹುಟ್ಟುವಂತೆ ಮಾಡುವ ಕೆಲಸ ಸುಲಭಸಾಧ್ಯವಾದುದಲ್ಲ. ಪಾರ್ವತಿ ಇದಿರಿನಲ್ಲಿದ್ದರೂ ಶಿವನು ಅಷ್ಟೊಂದು ನಿರ್ಲಿಪ್ತನಾಗಿದ್ದಾನೆ.

ದೇವೇಂದ್ರನು ಮನ್ಮಥನನ್ನು ತನ್ನ ಬಳಿಗೆ ಕರೆಯಿಸಿದನು. ಇಂದ್ರನು ಅವನನ್ನು ಗೌರವದಿಂದ ಸಿಂಹಾಸನದಲ್ಲಿ ಕೂಡಿಸಿ, "ಮನ್ಮಥಾ, ನಿನ್ನಿಂದ ಬಹು ಮುಖ್ಯವಾದೊಂದು ಕೆಲಸವಾಗಬೇಕಾಗಿದೆ. ತಾರಕಾಸುರನು ಬ್ರಹ್ಮನಿಂದ ವರಗಳನ್ನು ಪಡೆದು ಮೂರು ಲೋಕಗಳನ್ನೂ ಜಯಿಸಿ ನಮ್ಮನ್ನೆಲ್ಲಾ ಅಡಿಯಾಳಾಗಿ ಮಾಡಿಕೊಂಡಿದ್ದಾನೆ. ಮೂರು ಲೋಕಗಳನ್ನೂ ಆಳುವ ನನ್ನನ್ನೇ ಆ ತಾರಕನು ಆಳುತ್ತಿದ್ದಾನೆ. ಈಶ್ವರನ ಮಗನಿಂದ ಹೊರತು ಅವನಿಗೆ ಸಾವೇ ಬಾರದು. ಈಶ್ವರನೇನೋ ಕೈಲಾಸದಲ್ಲಿ ತಪಸ್ಸು ಮಾಡಿಕೊಂಡಿದ್ದಾನೆ. ಪಾರ್ವತಿ ಅವನಿಗೆ ಸಪರ್ಯೆ ಮಾಡಿಕೊಂಡಿದ್ದಾಳೆ. ಪಾರ್ವತಿ ಶಿವನ



ಸಮೀಪದಲ್ಲಿರುವಾಗ, ನೀನು ಹೇಗಾದರೂ ಮಾಡಿ ಶಿವನಿಗೆ ಮೋಹ ಬರುವ ಹಾಗೆ ಮಾಡಬೇಕು. ನಿನ್ನ ಈ ಸಹಾಯ ಬಹು ಮುಖ್ಯವಾಗಿದೆ" ಎಂದನು.

ಇಂದ್ರನ ಅಭಿಲಾಷೆಯನ್ನು ಕೇಳಿ ಮನ್ಮಥನು ಹೆದರಿ, "ಶಿವನಿಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡಲು ನನ್ನಿಂದಾದೀತೆ? ಶಿವನ ಶಕ್ತಿ ಏನು! ಮಹಿಮೆಯೇನು! ತಪಸ್ಸೇನು! ಅಪ್ಪಿತಪ್ಪಿ ಮುಂಗೋಪಿಯಾದ ಶಿವನು ಮೂರನೇ ಕಣ್ಣನ್ನು ತೆರೆದನೆಂದರೆ ಮೂರು ಲೋಕಗಳೂ ಬೂದಿಯಾದಾವು!" ಎಂದನು.

ಮನ್ಮಥನ ಮಾತು ಕೇಳಿ ಇಂದ್ರಾದಿ ದೇವತೆಗಳು ಅವನಿಗೆ ಧೈರ್ಯ ಹೇಳುತ್ತಾ, "ಅದೇನು ಹೀಗೆ ಹೇಳುವಿ ಮನ್ಮಥಾ! ನಿನ್ನ ಶಕ್ತಿಗೆ ಬಾಗದವರು ಮೂರು ಲೋಕಗಳಲ್ಲಿ ಯಾರಿದ್ದಾರೆ? ನಿನ್ನ ಪ್ರಭಾವದಿಂದ ತಾನೇ ಸ್ತ್ರೀಪುರುಷರು ಮೋಹಾಂಧರಾಗುತ್ತಾರೆ? ನಿನ್ನ ಹೂಬಾಣಗಳ ಹೊಡೆತಕ್ಕೆ ಎಂತಹ ತಪಸ್ವಿಗಳಾದರೂ ನಿಲ್ಲಬಲ್ಲರೆ? ಅದರ ಮೇಲೆ ನಾವು ಹೇಳುವ ಇದು ಲೋಕರಕ್ಷಣಾರ್ಥವಾದ ದೇವಕಾರ್ಯ. ಈಗ ನಿನ್ನಿಂದಲೇ ಲೋಕರಕ್ಷಣೆಯಾಗಬೇಕಾಗಿದೆ. ನಿನಗೆ ಸಹಾಯವಾಗಿ ಮಲಯಮಾರುತವನ್ನೂ, ವಸಂತನನ್ನೂ, ಶುಕಪಿಕಗಳನ್ನೂ ತೆಗೆದುಕೊಂಡು ಹೋಗು. ನಾವು ಕೂಡಾ ಬಂದು ನಿನಗೆ ಸಹಾಯ ಮಾಡುತ್ತೇವೆ. ಶಿವನನ್ನು ನಿನ್ನ ಬಾಣಗಳಿಂದ ಕದಲಿಸಿ ವಶಪಡಿಸಿಕೋ, ಏನೂ ಹೆದರಬೇಡ" ಎಂದನು.

ಮನ್ಮಥನು ಈ ಮಾತುಗಳಿಂದ ಉಬ್ಬಿದನು. ಶಿವನನ್ನು ಜಯಿಸಿ, ಅವನಿಗೆ ಪಾರ್ವತಿಯ ಮೇಲೆ ಮೋಹ ಬರುವಂತೆ ಮಾಡಲು ನಿಶ್ಚಯಿಸಿಕೊಂಡನು. ಅವನು ತನ್ನ ಐದು ಪುಷ್ಪ ಬಾಣಗಳನ್ನೂ ತೆಗೆದುಕೊಂಡು, ವಸಂತನನ್ನು ಜತೆಗಿಟ್ಟುಕೊಂಡು ಶಿವನು ತಪಸ್ಸು ಮಾಡುವ ವನಕ್ಕೆ ಹೋಗಿ ಒಂದು ರಹಸ್ಯ ಪ್ರದೇಶದಲ್ಲಿ ಹೊಂಚು ಹಾಕುತ್ತ, ಪಾರ್ವತಿಯ ಬರುವಿಕೆಯನ್ನು ನಿರೀಕ್ಷಿಸತೊಡಗಿದನು.

ಮನ್ಮಥನು ಪ್ರವೇಶಿಸಿದ ಕೂಡಲೇ ಆ ವನವು ವಸಂತ ಶೋಭೆಯಿಂದ ತುಂಬಿ ಹೋಯಿತು. ಮರಗಳೆಲ್ಲ ಹೊಸ ಚಿಗುರು ತಾಳಿ ಹೂಬಿಟ್ಟುವು. ಗಿಳಿ, ಗೊರವಂಕ, ಕೋಗಿಲೆಗಳು ಹಾಡ ತೊಡಗಿದುವು. ಸ್ವಲ್ಪ ಹೊತ್ತಿಗೆ ಪಾರ್ವತಿ ತನ್ನ ಸಖಿಯರೊಂದಿಗೆ ಆ ವನದೊಳಗೆ ಪ್ರವೇಶಮಾಡಿದಳು. ಅವರೆಲ್ಲರ ಕೈಯಲ್ಲಿ, ಹೂಗಳೂ, ಹಣ್ಣುಗಳೂ, ಪುಷ್ಪಗಳೂ, ಸುಗಂಧದ್ರವ್ಯಗಳೂ ಇದ್ದುವು. ವನವೆಲ್ಲಾ ಹೊಸದಾಗಿ ಮಾರ್ಪಾಟುಗೊಂಡಿರುವುದನ್ನು ನೋಡಿ, ಆಶ್ಚರ್ಯಪಡುತ್ತ ಪಾರ್ವತಿ ಶಿವನಿರುವಲ್ಲಿಗೆ ಹೋದಳು. ವನದ ನೂತನ ಸೌಂದರ್ಯವು ಅವಳನ್ನು ಉಲ್ಲಸಿತಗೊಳಿಸುತ್ತಿದ್ದಿತು.

ಶಿವನು ಪಾರ್ವತಿಯನ್ನು ಕಣ್ಣೆತ್ತಿ ನೋಡಿದನು. ಪಾರ್ವತಿ ಹೊಸ ಸೌಂದರ್ಯದಿಂದಿರುವಂತೆ ಅವನಿಗೆ

ಕಂಡಳು. ವನವೆಲ್ಲವೂ ವಿಚಿತ್ರವಾಗಿ ಕಾಣುತ್ತಿದ್ದಿತು. ಆದರೆ ಶಿವನು ಈ ಬದಲಾವಣೆಗೆ ಕಾರಣವೇನೆಂದು ಆಲೋಚನೆ ಮಾಡುವ ಗೊಡವೆಗೆ ಹೋಗದೆ, ಮತ್ತೆ ಕಣ್ಣುಗಳನ್ನು ಮುಚ್ಚಿ ತಪಸ್ಸಿನಲ್ಲಿ ಮುಳುಗಿಹೋದನು.

ಪಾರ್ವತಿ ಎಂದಿನಂತೆ ಶಿವನಿಗೆ ಷೋಡಶೋಪಚಾರಗಳಿಂದ ಪೂಜಿಸಿ, ನಮಸ್ಕಾರ ಮಾಡಿ ಧ್ಯಾನಿಸುತ್ತಾ, ಶಿವನ ಇದಿರಿನಲ್ಲಿ ನಿಂತಳು. ಆಗ ಶಿವನು ಅವಳನ್ನು ಮತ್ತೆ ಕಣ್ತೆರೆದು ನೋಡಿ, ಎಂದಿನಂತಿಲ್ಲದ ಅವಳ ಸೌಂದರ್ಯವನ್ನು ಪರೀಕ್ಷಿಸುತ್ತ, ಎವೆ ಇಕ್ಕದೆ ನೋಡುತ್ತಾ ಇದ್ದು ಬಿಟ್ಟನು.

ಸ್ವಲ್ಪ ಹೊತ್ತಿಗೆ ಪಾರ್ವತಿ ಶಿವನಿಂದ ಅಪ್ಪಣೆ ತೆಗೆದುಕೊಂಡಂತೆ ಅಡ್ಡಬಿದ್ದು, ಎದ್ದು ಹೋಗಲು ತೊಡಗಿದಳು. ಶಿವನು ಮಾತಾಡದೆ ಮತ್ತೆ ಕಣ್ಣು ಮುಚ್ಚಿಕೊಂಡನು. ಆ ಸಮಯದಲ್ಲಿ ಮನ್ಮಥನು ತನ್ನ ಪುಷ್ಪ ಬಾಣಗಳನ್ನು ಒಂದೊಂದಾಗಿ, ಶಿವನ ಹೃದಯಕ್ಕೆ ಗುರಿಯಿಟ್ಟು ಹೊಡೆಯ ತೊಡಗಿದನು. ಅರವಿಂದ, ಅಶೋಕ, ನವಮಲ್ಲಿಕಾ, ಚೂತಪುಷ್ಪಗಳು ಶಿವನನ್ನು ಕದಲಿಸಲಾರದೆ ಹೋದುವು. ಆದರೆ ಮನ್ಮಥನ ಐದನೇ ಬಾಣವಾದ ನೀಲೋತ್ಪಲವು ಶಿವನ ಹೃದಯವನ್ನು ಗಾಯಪಡಿಸಿತು. ಆ ನೋವನ್ನು ತಾಳಲಾಗದೆ ಶಿವನು ಕೋಪದಿಂದ, "ಯಾರೋ ಅದು, ನನ್ನನ್ನು ಪುಷ್ಪಬಾಣಗಳಿಂದ ಹೊಡೆಯುವವನು!" ಎನ್ನುತ್ತ ಎದ್ದು ನಿಂತು ಮೂರನೇ ಕಣ್ಣನ್ನು ತೆರೆದು ಆ ಕಡೆಗೆ ನೋಡಿದನು.

ಆ ಹಣೆಗಣ್ಣಿನೊಳಗಿನಿಂದ ಅಗ್ನಿ ಜ್ವಾಲೆಗಳು ಹೊರಟು, ವನವನ್ನೆಲ್ಲಾ ಕ್ಷಣ ಮಾತ್ರದಲ್ಲಿ ಬೂದಿ ಮಾಡಿದವು. ಅದರೊಂದಿಗೆ ಮನ್ಮಥನು ಕೂಡಾ ಬೂದಿಯಾಗಿ ಹೋದನು.

ಆ ವಿಪರೀತವನ್ನು ನೋಡಿ ದೇವೇಂದ್ರನೇ ಮೊದಲಾದ ದೇವತೆಗಳು ಶಿವನ ಇದಿರಿಗೆ ಬಂದು ದೀನರಾಗಿ ಸ್ತೋತ್ರಪಾಠ ಮಾಡಿ, ಶಿವನನ್ನು ಪ್ರಸನ್ನಗೊಳಿಸಿದರು. ಶಿವನು ತನ್ನ ಹಣೆಗಣ್ಣನ್ನು ಮುಚ್ಚಿ, ಅಗ್ನಿಜ್ವಾಲೆಗಳನ್ನು ಉಪಸಂಹಾರ ಮಾಡಿದನು.

ಆಗ ಮನ್ಮಥನ ಹೆಂಡತಿಯಾದ ರತೀದೇವಿ ಶಿವನ ಇದಿರಿಗೆ ಬಂದು, "ಸದಾಶಿವಾ! ನನ್ನ ಗಂಡನಿಂದ ಯಾವ ತಪ್ಪೂ ನಡೆದಿಲ್ಲ. ನಿನ್ನಿಂದ ಪಾರ್ವತಿಗೆ ಮಗನು ಹುಟ್ಟಿದರೆ, ಅವನು ತಾರಕಾಸುರನನ್ನು ಕೊಲ್ಲುತ್ತಾನೆಂಬ ಆಸೆಯಲ್ಲಿ, ನಿನಗೆ ಪಾರ್ವತಿಯ ಮೇಲೆ ಮೋಹ ಬರುವ ಹಾಗೆ ಮಾಡುವಂತೆ ಎಲ್ಲರೂ ನನ್ನ ಗಂಡನಿಗೆ ಪ್ರೇರೇಪಣೆ ಮಾಡಿದರು. ನಮ್ಮ ತಪ್ಪನ್ನು ಮನ್ನಿಸಿ, ನನಗೆ ಪತಿಭಿಕ್ಷೆ ನೀಡು. ದೇವಾ. ಪಾರ್ವತಿಯನ್ನು ವಿವಾಹವಾಗಿ ಲೋಕಗಳನ್ನು ಕಾಪಾಡು!" ಎಂದು ಬೇಡಿಕೊಂಡಳು.





# ಶಿವಪುರಾಣ

ರತೀದೇವಿ ಹೇಳಿಕೊಂಡ ದೈನ್ಯತೆಯ ಪ್ರಾರ್ಥನೆಯನ್ನು ಆಲಿಸಿದ ಶಿವನು, ಅವಳನ್ನು ದಯಾರ್ದ್ರತೆಯಿಂದ ನೋಡಿ, "ರತೀ, ದುಃಖಿಸಬೇಡ. ಮನ್ಮಥನು ಬ್ರಹ್ಮನ ಶಾಪದ ಕಾರಣದಿಂದಲೇ ಹೀಗೆ ಭಸ್ಮನಾಗಿದ್ದಾನೆ. ಹಿಂದೆ ಅವನು ಹೀಗೆಯೇ ಬ್ರಹ್ಮನನ್ನು ಕೂಡಾ ಹೂಬಾಣಗಳಿಂದ ಹೊಡೆದು, ಅವನಿಗೆ ಮಗಳ ಮೇಲೆ ಮೋಹ ಬರುವ ಹಾಗೆ ಮಾಡಿ ಅವನ ಶಾಪಕ್ಕೆ ಗುರಿಯಾದನು. ಅವನು ದೇಹದೊಂದಿಗಿದ್ದರೆ ಲೋಕದ ಮಿತಿ ಮೇರೆ ಮೀರಿ ಹೋಗುವುದೆಂತಲೇ ಅಂತಹ ಶಾಪಕ್ಕೆ ಕಾರಣವಾಯಿತು. ನಾನು ನಿನ್ನ ಪಾತಿವ್ರತ್ಯಕ್ಕೆ ಭಂಗ ಬರುವಂತೆ ಮಾಡುವುದಿಲ್ಲ. ಮನ್ಮಥನು ಲೋಕಕ್ಕೆ ಶರೀರವಿಲ್ಲದವನಾದರೂ ನಿನಗೆ ಮಾತ್ರ ಶರೀರದೊಂದಿಗೇ ಕಾಣುತ್ತಿರುತ್ತಾನೆ. ಇದೋ ಈಗಲೇ ಅವನಿಗೆ ಪ್ರಾಣ ಕೊಡುತ್ತೇನೆ" ಎಂದನು.

ಹೀಗೆ ರತಿಯನ್ನು ಸಂತೋಷಪಡಿಸಿ ಕಳುಹಿಸಿದ ಮೇಲೆ ಶಿವನು ತಪಸ್ಸನ್ನು ಬಿಟ್ಟು ಕೈಲಾಸದಲ್ಲಿ ತನ್ನ ರುದ್ರ ಗಣಗಳೊಂದಿಗೆ ಒಡ್ಡೋಲಗ ನಡೆಸಿ ಫಾಲಾಗ್ನಿಯನ್ನು ಕರೆದು, "ಅಗ್ನಿಯೇ, ಇನ್ನು ಮುಂದೆ ನೀನು ಹೊರಗೆಲ್ಲಿಯೂ ಕಾಣಸಬಾರದು. ವೃಕ್ಷಗಳೊಳಗೂ, ಪರ್ವತಗಳಲ್ಲಿಯೂ ಸಮುದ್ರದ ಗರ್ಭದೊಳಗೂ ಅಡಗಿಕೊಂಡಿರಬೇಕು" ಎಂದು ಆದೇಶ ಮಾಡಿ ಕಳುಹಿಸಿದನು.

ಶಿವನು ತಪಸ್ಸು ಮುಗಿಸಿ ಎದ್ದುದನ್ನು ನೋಡಿ, ದೇವತೆಗಳೊಂದಿಗೆ ದೇವೇಂದ್ರನು ಬಂದು ಶಿವನಿಗೆ ನಮಸ್ಕಾರ ಮಾಡಿ ಹೊರಟುಹೋದನು. ಈಗಾಗಲೇ ಮನ್ಮಥನ ಹೂಬಾಣಗಳು ಪರಿಣಾಮವಾಗಿದ್ದುವು. ಶಿವನ ಮನಸ್ಸು ಪಾರ್ವತಿಯ ಮೇಲೆ ಸಂಲಗ್ನವಾಗಿತ್ತು. ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂಬ ನಿಶ್ಚಯಕ್ಕೆ ಬಂದನು ಶಿವ.

ತಪಸ್ಸಿನಲ್ಲಿದ್ದ ಶಿವನು ಒಮ್ಮೆಗೇ ಕಣ್ಣು ತೆರೆದು ವನವನ್ನೂ, ಮನ್ಮಥನನ್ನೂ ಸುಟ್ಟುಹಾಕಿದುದನ್ನು ಪ್ರತ್ಯಕ್ಷ ನೋಡಿದ ಪಾರ್ವತಿ, ಹೆದರಿ ತನ್ನ ಗೆಳತಿಯರೊಂದಿಗೆ ಓಡುತ್ತಾ ಮನೆಗೆ ಹೋಗಿ ಸೇರಿ



ಸಮಯ ಸಂದರ್ಭ ನೋಡಿ ನಿನ್ನ ಮದುವೆಯನ್ನು ಶಿವನೊಂದಿಗೆ ಮಾಡಿಸುತ್ತೇವೆ" ಎಂದು ಸಮಾಧಾನ ಹೇಳಿದರು.

ಆಮೇಲೆ ಪಾರ್ವತಿ ನಾರದನು ಹೇಳಿದ ಪ್ರಕಾರ ಶಿವಪಂಚಾಕ್ಷರಿಯನ್ನು ಜಪಿಸುತ್ತ, ಶಿವನ ಧ್ಯಾನದಲ್ಲೇ ಲೀನಳಾದಳು. ಪಾರ್ವತಿ ತನ್ನ ಗೆಳತಿಯರನ್ನು ಕರೆದುಕೊಂಡು, ಶೃಂಗತೀರ್ಥಕ್ಕೆ ಹೋಗಿ, ಅಲ್ಲಿ ಪಂಚಾಕ್ಷರೀ ಮಹಾ ಮಂತ್ರವನ್ನು ಜಪಿಸುತ್ತ ತೀವ್ರವಾದ ತಪಸ್ಸು ಮಾಡಿಕೊಂಡಿದ್ದಳು. ಅದೆಷ್ಟು ತೀವ್ರವೆಂದರೆ, ಅವಳು ಒಂದು ಎಲೆಯನ್ನು ಸಹಾ ತಿನ್ನದೆ ತಪಸ್ಸು ಮಾಡುವುದನ್ನು ನೋಡಿ, ಅಲ್ಲಿರುವ ಮುನಿಗಳು ತುಂಬಾ ಆಶ್ಚರ್ಯಪಡುತ್ತ ಅವಳನ್ನು "ಅಪರ್ಣಾ" ಎಂದು ಸಂಬೋಧಿಸ ತೊಡಗಿದರು.

ಒಂದು ದಿನ ಮೇನಕಾ ಹಿಮವಂತರು ತಮ್ಮ ಕುಮಾರಿಯನ್ನು ನೋಡಲು ಬಂದು, "ಅಮ್ಮಾ, ಆಹಾರವೇನೂ ತೆಗೆದುಕೊಳ್ಳದೆ ಇಷ್ಟೊಂದು ಘೋರವಾದ ತಪಸ್ಸನ್ನು ಏಕೆ ಮಾಡುವಿ ? ಮನ್ಮಥನನ್ನು ಮಸಿಮಾಡಿದ ಶಿವನು ನಿನ್ನನ್ನು ಅನುಗ್ರಹಿಸುವನೆಂಬುದರಲ್ಲಿ ಸಂದೇಹಿಸುವಿಯಾ ? ಅವನು ಮುಂಗೋಪಿಯೆಂದೂ, ದಯಾಹೀನನೆಂದೂ ಭಾವಿಸಿಕೊಂಡು ಹೀಗೆ ತಪಸ್ಸು ಮಾಡುವಿಯಾ ? ಯಾವುದಕ್ಕೂ ಮಿತಿ ಬೇಕಮ್ಮ. ಚಿಕ್ಕ ಹುಡುಗಿಯಾದ ನೀನು ಇಷ್ಟೊಂದು ತೀವ್ರತೆ ವಹಿಸಬಾರದಮ್ಮ. ಏಳು, ಮನೆಗೆ ಬಾ" ಎಂದರು.

ಪಾರ್ವತಿ ಅವರ ಮಾತುಗಳನ್ನು ಕೇಳಿ, "ಮೊದಲು ನೀವು ನನಗೆ ಏನು ಹೇಳಿದಿರಿ ? ಶಿವನಿಗೆ ನನ್ನನ್ನು ಕೊಟ್ಟು ಮದುವೆ ಮಾಡುತ್ತೇವೆಂದಿದ್ದೀರಿ. ನನಗೆ ಅವನ ಮೇಲೆ ನೀವು ಹೇಳುವ ಸಂದೇಹವೇನೂ ಇಲ್ಲ. ನಿಮ್ಮ ಮಾತನ್ನು ಆದಷ್ಟು ಬೇಗ ನಿಜಪಡಿಸಲಿಕ್ಕಾಗಿಯೇ ನಾನು ಪ್ರಯತ್ನಿಸುತ್ತಿದ್ದೇನೆ.

ಕೊಂಡಳು. ನಡೆದುದನ್ನೆಲ್ಲಾ ಕೇಳಿ ಮೇನಕಾ ಹಿಮವಂತರು ಬಹಳವಾಗಿ ಬೆಚ್ಚಿಬಿದ್ದರು. ತಮ್ಮ ಕುಮಾರಿ ಪುನರ್ಜನ್ಮವೆತ್ತಿ ಬಂದಳೆಂದು ಭಾವಿಸಿಕೊಂಡರು. ಅವರು ಪಾರ್ವತಿಗೆ ದೃಷ್ಟಿ ಸುತ್ತಿಹಾಕಿ, ಧೈರ್ಯ ಬರುವಂತೆ ಸಮಾಧಾನ ಹೇಳಿ ಅವಳ ಭಯವನ್ನು ಹೋಗಲಾಡಿಸಿದರು.

ಭಯವಳಿದರೂ ಪಾರ್ವತಿ ಶಿವನನ್ನು ಮಾತ್ರ ಮರೆಯಲಿಲ್ಲ. ಅವನ ರೌದ್ರ ಪ್ರಭಾವವನ್ನು ನೆನೆದಂತೆ, ಬಹು ದೊಡ್ಡ ಮಹನೀಯನಾಗಿ ಇನ್ನಷ್ಟು ಆಳವಾಗಿ ಅವಳ ಮನಸ್ಸಿನಲ್ಲಿ ಬೇರೂರಿದನು. ಅಂತೆಯೇ ವಿರಹ ವೇದನೆಯನ್ನು ಅನುಭವಿಸ ತೊಡಗಿದಳು ಪಾರ್ವತಿ. ಅವಳಿಗೆ ಶಿವನ ಧ್ಯಾನದ ಹೊರತು ಮತ್ತೇನೂ ಬೇಕಿರಲಿಲ್ಲ. ನಿದ್ರಾಹಾರಗಳನ್ನು ಬಿಟ್ಟು, ತಪಿಸುವ ತಮ್ಮ ಮಗಳನ್ನು ನೋಡಿ ಮೇನಕಾ ಹಿಮವಂತರು, "ಸ್ವಲ್ಪ ನಿಧಾನಿಸಮ್ಮಾ, ಶಿವನು ಈಗತಾನೇ ತಪಸ್ಸಿನಿಂದ ಎದ್ದಿದ್ದಾನೆ.

ಪುತ್ರೀ ಮೋಹದಿಂದ ನೀವು ಚಂಚಲರಾಗದೆ ನನ್ನ ಚಿಂತೆಯನ್ನು ಬಿಟ್ಟು, ಮನೆಗೆ ಹೋಗಿ, ಸುಖವಾಗಿ ಕಾಲ ನಿರೀಕ್ಷೆ ಮಾಡಿಕೊಂಡಿರಿ" ಎಂದು ತಾಯಿ ತಂದೆಯರೊಂದಿಗೆ ಹೇಳಿದಳು.

ಇಷ್ಟರಲ್ಲಿ ಶಿವನು ಪಾರ್ವತಿಯನ್ನು ಹೇಗೆ ಮದುವೆಯಾಗುವುದೆಂದು ಆಂದೋಳನೆ ಪಡುತ್ತ, ಯಾರೊಡನೆ ಹೇಳುವುದೆಂದು ಆಲೋಚಿಸಿ ಕೊಂಡಿದ್ದನು. ಆಗ ಬ್ರಹ್ಮ, ವಿಷ್ಣು, ದೇವೇಂದ್ರರು ಶಿವನ ಬಳಿಗೆ ಬಂದು, "ದೇವಾ ಮಹೇಶ್ವರಾ! ಇನ್ನು ತಡಮಾಡದೆ ಪಾರ್ವತಿಯನ್ನು ಮದುವೆ ಯಾಗಿ, ಲೋಕಗಳಿಗೆ ಒಳಿತು ಮಾಡಬೇಕಾಗಿದೆ. ನಿನಗೆ ಹುಟ್ಟುವ ಮಗನಿಂದ ಹೊರತು ಬೇರೆ ರೀತಿಯಲ್ಲಿ ಮರಣವಿಲ್ಲದಂತೆ ವರಪಡೆದ ತಾರಕನಿಂದ ಲೋಕಗಳು ತಪಿಸಿಕೊಂಡಿವೆ. ಅವನು ಸತ್ತರೆ ಹೊರತು ಲೋಕಗಳಿಗೆ ಸುಖವಾಗದು. ಆದುದರಿಂದ ಬೇಗನೆ ನೀನು ಪಾರ್ವತಿಯನ್ನು ವರಿಸು" ಎಂದು ಕೇಳಿಕೊಂಡರು.

ಆ ಮಾತುಗಳನ್ನು ಕೇಳಿ ಶಿವನು ತನ್ನೊಳಗೆ ಸಂತೋಷಪಟ್ಟರೂ, ಅದನ್ನು ತೋರಗೊಡದೆ, "ಮದುವೆಯಾದರೆ ತಪಸ್ಸು ಸರಿಯಾಗಿ ಸಾಗ ಲಾರದು. ಮನ್ಮಥನನ್ನು ಜಯಿಸಬಹುದಾದರೂ, ಸ್ತ್ರೀಯರ ಕಣ್ಣಿನ ಬಾಣಗಳನ್ನು ತಡೆದುಕೊಳ್ಳು ವುದು ಬಹಳ ಕಷ್ಟ. ಪಾರ್ವತಿಯೊಂದಿಗೆ ಗೃಹಸ್ಥಾ ಶ್ರಮದಲ್ಲಿರುವುದಕ್ಕಿಂತಲೂ ನನ್ನ ಪಾಡಿಗೆ ತಪಸ್ಸಿ ನಲ್ಲಿ ನೆಮ್ಮದಿಯಾಗಿರುವುದೇ ಒಳ್ಳೆಯದೆಂದು ಸಂಕಲ್ಪಿಸಿದ್ದೇನೆ" ಎಂದನು.

ಆ ಮಾತಿಗೆ ಬ್ರಹ್ಮನೇ ಮೊದಲಾದವರು ಒಪ್ಪಿ ಕೊಳ್ಳದೆ, ಗೃಹಸ್ಥಾಶ್ರಮವೇ ದೊಡ್ಡದೆಂದೂ, ಹೆಂಡತಿ ಇಲ್ಲದ ಏಕಾಂಗಿಯನ್ನು ಯಾರೂ ಗೌರವಿಸ ಲಾರರೆಂದೂ, ಶಿವನು ಗೃಹಸ್ಥನಾಗಿದ್ದರೇನೇ, ಗೃಹಸ್ಥಾಶ್ರಮದಲ್ಲಿ ರಾಜಯೋಗಿಯಾಗಿದ್ದರೇನೇ,



ಲೋಕಗಳಿಗೆ ಒಳಿತಾಗುವುದೆಂದೂ, ತ್ರಿಮೂರ್ತಿಗಳ ಮೂಲ ಕಾರ್ಯಗಳು ಸುಗಮವಾಗಿ ಸಾಗಲು ಶಿವನು ವಿವಾಹವಾಗಲೇಬೇಕೆಂದೂ ವಿವರಿಸಿ ಹೇಳಿದರು.

ಆಮೇಲೆ ಶಿವನು ಅವರು ಹೇಳಿದಂತೆಯೇ ಮಾಡುವೆನೆಂದು ಮಾತು ಕೊಟ್ಟು ಅವರನ್ನು ಸಮಾಧಾನಪಡಿಸಿ ಕಳುಹಿಸಿದನು. ಅವನಿಗೆ ಪಾರ್ವತಿಯ ಮೇಲೆ ವಿರಹವಿದ್ದರೂ, ಪಾರ್ವತಿಯ ಮನಸ್ಸನ್ನು ಸ್ವತಃ ಪರೀಕ್ಷಿಸಿ ತಿಳಿಯಬೇಕೆಂದು ತೋರಿತು. ಅದಕ್ಕಾಗಿ ಶಿವನು ಮುದುಕ ಯತಿ ಯಂತೆ ವೇಷ ಧರಿಸಿ, ದಂಡ ಕಮಂಡಲು ಧರಿಸಿ, ಪಾರ್ವತಿ ತಪಸ್ಸು ಮಾಡುತ್ತಿರುವಲ್ಲಿಗೆ ಹೋದನು. ಪಾರ್ವತಿ ವೃದ್ಧನ ಮುಖದಲ್ಲಿ ಬೆಳಗುವ ತೇಜಸ್ಸನ್ನು ನೋಡಿ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಒಬ್ಬ ನಾಗಿರಬೇಕೆಂದು ಅನುಮಾನಪಟ್ಟಳು. ಆತನನ್ನು ಆದರದಿಂದ ಬರಮಾಡಿಕೊಂಡು ಪೂಜಿಸಿ, "ತಾವು



ಯಾರು ಸ್ವಾಮಿ? ನಾನು ತಪಸ್ಸಿನಲ್ಲಿರುವ ಈ ಸ್ಥಳಕ್ಕೆ ಯಾವ ಕಾರಣದಿಂದ ಬಂದಿರಿ? ನನ್ನಿಂದ ನಿಮಗೇನಾದರೂ ಕಾರ್ಯವಾಗಬೇಕಾಗಿದೆಯೇ?" ಎಂದು ಕೇಳಿದಳು.

"ನಾನು ಬ್ರಹ್ಮವಂಶಕ್ಕೆ ಸೇರಿದವನು. ಲೋಕಗಳ ಕ್ಷೇಮವು ಹೇಗಿದೆಯೆಂದು ನೋಡುತ್ತಾ ತಿರುಗುವವನು. ನೀನು ಯಾರ ಮಗಳು? ಯಾವ ಉದ್ದೇಶಕ್ಕಾಗಿ ಇಲ್ಲಿ ಬಂದು ಕುಳಿತು ಹೀಗೆ ಕಠೋರ ತಪಸ್ಸು ಮಾಡುತ್ತಿರುವಿ?" ಎಂದು ಶಿವನು ಅವಳನ್ನು ಕೇಳಿದನು.

ಪಾರ್ವತಿ ಅವನ ಪ್ರಶ್ನೆಗೆ, "ನಾನು ಮೇನಕಾ ಹಿಮವಂತರ ಕುಮಾರಿ. ನನ್ನನ್ನು ಪಾರ್ವತಿ ಎಂದು ಕರೆಯುತ್ತಾರೆ. ಈಶ್ವರನು ಕೈಲಾಸ ಗಿರಿಯ ಭಾಗದಲ್ಲಿ ತಪಸ್ಸು ಮಾಡಿಕೊಂಡಿರುವಾಗ, ನಾನು ಆತನಿಗೆ ಪರಿಚರ್ಯೆ ಮಾಡಿಕೊಂಡಿದ್ದೆನು. ಆಗ ಒಂದು ದಿನ ಮನ್ಮಥನು ತನ್ನ ಹೂ ಬಾಣಗಳಿಂದ ಶಿವನನ್ನು ಕೆಣಕಲು, ಶಿವನು ಮನ್ಮಥನನ್ನು ತನ್ನ ಫಾಲಾಗ್ನಿಯಿಂದ ದಹಿಸಿದನು. ನಾನೂ ಹೆದರಿ ಓಡಿಬಿಟ್ಟೆನು. ಆದರೆ ಶಿವನನ್ನು ಮಾತ್ರ ಮರೆಯಲಿಲ್ಲ. ಆಮೇಲೆ ನಾರದರು ಬಂದು ನನಗೆ ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದರು. ಆ ಮಂತ್ರವನ್ನು ಜಪಿಸುತ್ತಾ ಪರಮಶಿವನನ್ನೇ ಪತಿಯಾಗಿ ಪಡೆಯಬೇಕೆಂಬ ಸಂಕಲ್ಪದಲ್ಲಿ ತಪಸ್ಸು ಮಾಡಿಕೊಂಡಿದ್ದೇನೆ. ಇಷ್ಟು ತಪಸ್ಸು ಮಾಡಿಕೊಂಡಿದ್ದರೂ ಇನ್ನೂ ಶಿವನಿಗೆ ನನ್ನ ಮೇಲೆ ಅನುಗ್ರಹವಾಗಲಿಲ್ಲ. ಆದುದರಿಂದ ಬೇಗದಲ್ಲೇ ಅಗ್ನಿಪ್ರವೇಶಮಾಡಿ ಈ ಜನ್ಮವನ್ನು ಮುಗಿಸಬೇಕೆಂದಿದ್ದೇನೆ" ಎಂದು ಹೇಳಿದಳು.

ಅದನ್ನು ಕೇಳಿ ಶಿವನು, "ನೀನು ಕೇವಲ ತಪ್ಪು ತಿಳುವಳಿಕೆಯುವಳಾಗಿರುವಿ. ಈಶ್ವರನು ತಪಃ ಸಮಾಧಿಯಲ್ಲೇ ಲಯಿಸಿ ಹೋಗಿರುವ ಮಹಾವಿರಾಗಿ. ನೀನು ನಿನ್ನ ತಪಸ್ಸಿನಿಂದ ಲೋಕಕ್ಕೆ ಅಪಾಯ ತರುವುದಕ್ಕಿಂತ, ಮನೆಗೆ ಹಿಂದಿರುಗಿ, ದೇವತೆಗಳಲ್ಲಿ ಒಬ್ಬನನ್ನು ವಿವಾಹಮಾಡಿಕೊಳ್ಳುವುದು ಒಳ್ಳೆಯದು. ಅನಾಗರಿಕ ಶಿವನು ನಿನಗೆ ತಕ್ಕ ಗಂಡನಲ್ಲ. ನಿನ್ನ ಒಳಿತಿಗಾಗಿಯೇ ಹೇಳುತ್ತಿದ್ದೇನೆ. ನನ್ನ ಮಾತು ಕೇಳು" ಎಂದನು.

"ನೀವು ನನಗೇನೂ ಹೇಳಬೇಕಾಗಿಲ್ಲ. ಈ ಬಗೆಯ ಬುದ್ಧಿವಾದವು ನನಗೆ ಬೇಕಾಗಿಲ್ಲ. ವಿಶ್ರಾಂತಿ ಸಾಕೆನಿಸಿದರೆ ಹೊರಟುಹೋಗಬಹುದು. ನಾನು ನನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುವವಳಲ್ಲ" ಎಂದಳು ಪಾರ್ವತಿ ಬೇಸರದಿಂದ.

"ಹಾಗೆಯೇ ಹೋಗುತ್ತೇನೆ. ಹೋಗುವ ಮೊದಲು ನಿನಗೆ ಇನ್ನೂ ಎರಡು ಹಿತವಚನ ಹೇಳಬೇಕಾಗಿದೆ. ಶಿವನ ಸಂಗತಿ ಪೂರ್ತಿ ನನಗೆ ಗೊತ್ತಿದೆ. ಆವನು ಕೇವಲ ದರಿದ್ರನು. ಪಟ್ಟೆ ಪೀತಾಂಬರ ಧರಿಸುವವನಲ್ಲ. ಚರ್ಮವನ್ನೆ ಸುತ್ತಿಕೊಳ್ಳುತ್ತಾನೆ, ತಿರುಗಾಡಲಿಕ್ಕೆ ಎತ್ತಿನ ಹೊರತು



ಒಳ್ಳೆಯ ವಾಹನವೂ ಅವನಿಗಿಲ್ಲ. ದೆವ್ವ, ಭೂತ ಗಣಗಳನ್ನು ಕರೆದುಕೊಂಡು ತಿರುಗುತ್ತಲಿರುತ್ತಾನೆ. ಶರೀರಕ್ಕೆ ಗಂಧವನ್ನು ಹಚ್ಚಿಕೊಳ್ಳಲಾರನು. ಬೂದಿಯನ್ನು ಬಳಿದುಕೊಳ್ಳುತ್ತಿರುತ್ತಾನೆ. ಅಂಥವನನ್ನು ಮದುವೆಯಾಗಿ ನೀನೇನು ಸುಖವನ್ನು ಅನುಭವಿಸುವಿ ? " ಎಂದು ಹೇಳಿದನು ಶಿವ.

ಪಾರ್ವತಿಗೆ ತುಂಬಾ ಸಿಟ್ಟು ಬಂದಿತು. "ಹೀಗೆಲ್ಲಾ ಹೇಳುವ ನೀನು ನಿಜವಾದ ಯತಿಯೇ ಅಲ್ಲ. ದೊಡ್ಡ ಜ್ಞಾನಿ ಎಂದು ತಪ್ಪಬಿದ್ದನು. ಶಿವನಿಗೆ ಅಷ್ಟೈಶ್ವರ್ಯಗಳೂ ಇವೆ. ಶಿವ ದೂಷಣೆ ಮಾಡಿದವರು ಏಳು ಜನ್ಮಗಳವರೆಗೆ ದಾರಿದ್ರ್ಯವನ್ನೇ ಅನುಭವಿಸುತ್ತಾರೆ" ಎಂದು ತನ್ನ ಪರಿಚಾರಿಕೆಯರನ್ನು ಕರೆದು "ಈ ಕಳ್ಳ ಯತಿಯನ್ನು ಹೊರಗೆ ಕರೆದೊಯ್ದು ಬಿಟ್ಟು ಬಂದುಬಿಡಿರಿ" ಎಂದಳು.

ಶಿವನು ನಕ್ಕು–"ಪಾರ್ವತೀ, ಪ್ರತ್ಯಕ್ಷ ಶಿವನಾದ ನನ್ನನ್ನೇ ಹೊರಗೆ ಹಾಕಿಸುವಿಯಾ ? ನಿನ್ನ ಮನಸ್ಸನ್ನು ತಿಳಿದುಕೊಳ್ಳೋಣವೆಂತಲೇ ಹೀಗೆ ಯತಿ ವೇಷದಲ್ಲಿ ಬಂದೆ. ನಿಜಕ್ಕೂ ನಿನ್ನ ವಿರಹದಿಂದ ನಾನು ತುಂಬಾ ಸಂಕಟಪಡುತ್ತಿದ್ದೇನೆ; ಹೊರಡು. ನನ್ನೊದಿಂಗೆ ಕೈಲಾಸಕ್ಕೆ ಬಾ " ಎನ್ನುತ್ತಾ ಪಾರ್ವತಿಯ ಕೈ ಹಿಡಿದನು.

ಪಾರ್ವತಿ ಶಿವನ ಕೈಯನ್ನು ಕೊಸರಿ ಬಿಡಿಸಿಕೊಂಡು ನೋಡಿದಾಗ, ಸಾಕ್ಷಾತ್ ಶಿವನೇ ಅವಳ ಇದಿರಿನಲ್ಲಿ ನಿಂತಿದ್ದನು. ಅವಳು ಒಂದು ಹೆಜ್ಜೆ ಹಿಂದೆ ಸರಿದು ಕ್ಷಮಿಸಬೇಕೆಂದು ಕೈ ಮುಗಿದು, "ದೇವಾ, ಹೀಗೆ ನಾನು ಹೊರಟು ಬರುವುದು ಭಾವ್ಯವಾಗಲಾರದೆಂದು ನಿನಗೆ ಗೊತ್ತಿಲ್ಲವೇ ? ಹೀಗೂ ಪರೀಕ್ಷಿಸಬಾರದು. ನನ್ನ ತಾಯಿತಂದೆಯರ ಅನುಮತಿ ಪಡೆದು, ನನ್ನನ್ನು ವಿವಾಹಮಾಡಿಕೊಂಡು ನಿನ್ನೊಂದಿಗೆ ಕರೆದುಕೊಂಡು ಹೋಗಬೇಕು" ಎಂದು ಹೇಳಿದಳು.

ಶಿವನು ಮುಗುಳು ನಗುತ್ತ ತಲೆದೂಗಿದನು. ಪಾರ್ವತಿ ಶಿವನಿಗೆ ನಮಸ್ಕರಿಸಿ, ತಪಸ್ಸಿನ ಫಲ ಸಿಕ್ಕಿದ ತೃಪ್ತಿಯಿಂದ ತನ್ನ ಪರಿಚಾರಿಕೆಯರೊಂದಿಗೆ ಮನೆಯ ಕಡೆಗೆ ಹೋದಳು. ಮೇನಕಾ ಹಿಮವಂತರು ನಡೆದ ಸಂಗತಿಯನ್ನು ತಿಳಿದು ಸಂತೋಷಪಡುತ್ತ, ಪಾರ್ವತಿಯ ವಿವಾಹಕ್ಕೆ ಒಳ್ಳೆಯ ಮುಹೂರ್ತ ನಿಶ್ಚಯಿಸಿದರು. ಅಮೇಲೆ ವಿವಾಹದ ಪ್ರಯತ್ನಗಳನ್ನು ಪ್ರಾರಂಭಿಸಿದರು.

ಶಿವನು ಕೂಡಾ ಕೈಲಾಸಕ್ಕೆ ಹಿಂದಿರುಗಿ ಪ್ರಮಥ ಗಣಗಳೊಂದಿಗೆ, ಮನ್ಮಥನು ತನ್ನನ್ನು ಹೂಬಾಣಗಳಿಂದ ಹೊಡೆದಲ್ಲಿಂದ, ತನ್ನ ಮನಸ್ಸು ಪಾರ್ವತಿಯ ಮೇಲೆ ಸಂಲಗ್ನವಾದಲ್ಲಿಯವರೆಗೆ ಹೇಳಿದನು. ಇನ್ನು ತಾನು ತಪಸ್ಸಿನಲ್ಲಿ ಕುಳಿತಿರಲು ಸಾಧ್ಯವಿಲ್ಲವೆಂದೂ, ಪಾರ್ವತಿಯನ್ನು ವಿವಾಹಮಾಡಿಕೊಳ್ಳಲು ನಿಶ್ಚಯಿಸಿಬಿಟ್ಟೆನೆಂದೂ, ಅದಕ್ಕಾಗಿ ಮಧ್ಯವರ್ತಿತ್ವ ನಡೆಸಲು ಸಪ್ತರ್ಷಿಗಳನ್ನು ಕರೆಯಿಸಬೇಕೆಂದೂ ಹೇಳಿದನು.




ಕೂಡಲೇ ನಂದೀಶ್ವರನು ಹೊರಟುಹೋಗಿ, ಸಪ್ತ ಮಹರ್ಷಿಗಳನ್ನು ತನ್ನೊಂದಿಗೆ ಕರೆದುಕೊಂಡು ಕೈಲಾಸಕ್ಕೆ ಬಂದನು.

ಅವರೆಲ್ಲರೂ ಈ ನೆವನದಲ್ಲಿ ತಮಗೆ ಶಿವದರ್ಶನ ವಾದುದಕ್ಕೆ ಸಂತೋಷಪಟ್ಟು, "ಪರಮೇಶ್ವರಾ, ನಮ್ಮಿಂದ ಆಗಬೇಕಾದ ಕಾರ್ಯವೇನೆಂಬುದನ್ನು ಅಪ್ಪಣೆ ಮಾಡಿದರೆ ಮಾಡಲು ಸಿದ್ಧರಾಗಿದ್ದೇವೆ" ಎಂದು ಕೇಳಿಕೊಂಡರು.

"ಮಹಾ ಮುನಿಗಳೇ ! ನಾನು ಪಾರ್ವತಿಯನ್ನು ವಿವಾಹಮಾಡಿಕೊಂಡು ಗೃಹಸ್ಥನಾಗಲು ನಿಶ್ಚಯಿಸಿದ್ದೇನೆ. ಆದುದರಿಂದ ನೀವು ಮೇನಕಾ ಹಿಮವಂತರ ಮನೆಗೆ ಹೋಗಿ, ಅವರ ಕುಮಾರಿಯಾದ ಪಾರ್ವತಿಯನ್ನು ನನಗೆ ಕೊಟ್ಟು ಮದುವೆಮಾಡುವ ಹಾಗೆ ಒಳ್ಳೆಯ ಮಾತುಗಳಿಂದ ಒಪ್ಪಿಸಿ, ಮುಹೂರ್ತ ಇಟ್ಟು ನನ್ನ ವಿವಾಹವನ್ನು ನಡೆಸಿಕೊಡಬೇಕು" ಎಂದು ಶಿವನು ಸಪ್ತಮಹರ್ಷಿಗಳೊಂದಿಗೆ ಹೇಳಿದನು.

ಸಪ್ತಮಹರ್ಷಿಗಳು ಆದಕ್ಕೆ ಸಂತೋಷದಿಂದ ಒಪ್ಪಿಕೊಂಡು, ಹಿಮವಂತನಿರುವ ಪರ್ವತಗೃಹಕ್ಕೆ ಹೋದರು. ಮೇನಕಾ ಹಿಮವಂತರು ಅವರಿಗೆ ಆದರಪೂರ್ವಕವಾಗಿ ಅತಿಥಿ ಸತ್ಕಾರಮಾಡಿ, "ಯಾವ ಕೆಲಸದ ಮೇಲೆ ನೀವುಗಳು ನನ್ನ ಗೃಹವನ್ನು ಪಾವನ ಮಾಡಿದಿರೋ ಹೇಳಬೇಕು. ನೀವು ಹೇಳಿದಂತೆ ನಡೆಯುವವನು ನಾನು" ಎಂದನು.

ಅದಕ್ಕೆ ಸಪ್ತಮಹರ್ಷಿಗಳು "ಪುಣ್ಯವಂತರಾದ ಮೇನಕಾ ಹಿಮವಂತರೇ. ನಿಮ್ಮ ಅದೃಷ್ಟವು ಬಹಳ ದೊಡ್ಡದು. ಪರಮೇಶ್ವರೀ ದೇವಿಯೇ ನಿಮ್ಮ ಹೊಟ್ಟೆಯಲ್ಲಿ ಪಾರ್ವತಿಯಾಗಿ ಹುಟ್ಟಿದ್ದಾಳೆ. ಅವಳನ್ನು ಶಿವನು ಮದುವೆಯಾಗಬೇಕೆಂದು ಬಯಸಿ ನಮ್ಮನ್ನು ಕಳುಹಿಸಿದ್ದಾನೆ. ಈ ಮದುವೆಯಿಂದ ನಿಮ್ಮ ಕೀರ್ತಿ ಮೂರು ಲೋಕಗಳಲ್ಲಿಯೂ ವ್ಯಾಪಿಸುತ್ತದೆ" ಎಂದರು.

ಆ ಮಾತು ಕೇಳಿ ಮೇನಕಾ ಹಿಮವಂತರು, "ಅಯ್ಯಾ ಮಹರ್ಷಿಗಳೇ, ನಾವು ಕೂಡಾ ಪಾರ್ವತಿಯನ್ನು ಶಿವನಿಗೆ ಕೊಟ್ಟು ಮದುವೆ ಮಾಡಬೇಕೆಂತಲೇ ಇದ್ದೆವು. ಆದರೆ ನಿನ್ನೆ ಒಬ್ಬ ಭಿಕ್ಷು ಬಂದು ಪಾರ್ವತಿಯನ್ನು ಶಿವನಿಗೆ ಕೊಡಬಾರದೆಂದೂ, ಶಿವನಿಗೆ ಒಂದು ರಾಜ್ಯವಾಗಲಿ, ಸುಖಭೋಗಭಾಗ್ಯಗಳಾಗಲಿ ಇಲ್ಲದಂತಹ ಸ್ಮಶಾನದಲ್ಲಿ ಭೂತಗಣಗಳೊಂದಿಗೆ ಇರುವವನೆಂದೂ, ಹಾವುಗಳನ್ನು ಧರಿಸಿ, ಸರಿಯಾದ ಭೋಜನ ಪಾತ್ರವಿಲ್ಲದೆ ಕಪಾಲಗಳಲ್ಲಿ ತಿನ್ನುವವನೆಂದೂ ಎಚ್ಚರಿಕೆ ಕೊಟ್ಟು ಹೋದನು. ಆದುದರಿಂದ ನಮ್ಮ ಮಗಳು ಸುಖವಾಗಿರಬೇಕಾದರೆ ಶಿವನಿಗೆ ಅವಳನ್ನು ಕೊಟ್ಟು ಮದುವೆ ಮಾಡಬಾರದೆಂದೇ ನಿಶ್ಚಯಿಸಿದ್ದೇವೆ. ಕ್ಷಮಿಸಿರಿ" ಎಂದನು.

ಆ ಮಾತು ಕೇಳಿ ಸಪ್ತಮಹರ್ಷಿಗಳು ಬಹಳ ಆಶ್ಚರ್ಯಪಡುತ್ತ, "ಹೀಗೆ ಹೇಳಿಹೋದ ಆ ಭಿಕ್ಷು

ಯಾವನೋ ದುಷ್ಟನಾಗಿರಬೇಕು. ಶಿವಪಾರ್ವತಿಯರ ಮದುವೆಯನ್ನು ಕೆಡಿಸಲು ನಿಮ್ಮೊಂದಿಗೆ ಹಾಗೆ ಹೇಳಿದ್ದಾನೆ. ನಿಮ್ಮ ಕುಮಾರಿ ಆ ಪರದೇವತೆಯ ಅವತಾರವೆಂಬುದನ್ನು ಮರೆಯಬೇಡಿರಿ. ಇವಳು ಶಿವನನ್ನು ಮದುವೆಯಾಗಲಿಕ್ಕೆಂದೇ ನಿಮ್ಮ ಕುಮಾರಿಯಾಗಿ ಹುಟ್ಟಿದ್ದಾಳೆ" ಎಂದರು.

ಈ ಸಂದರ್ಭದಲ್ಲಿ ವಸಿಷ್ಠ ಮಹಾಮುನಿ ಮೇನಕಾ ಹಿಮವಂತರಿಗೆ ಅನರಣ್ಯನೆಂಬ ರಾಜನ ಕಥೆಯನ್ನು ಹೇಳಿದನು. ಆ ಕಥೆ ಏನೆಂದರೆ,

ಇಂದ್ರಸಾವರ್ಣಿ ಎಂಬ ಹದಿನಾಲ್ಕನೇ ಮನುವಿನ ವಂಶದಲ್ಲಿ ಅನರಣ್ಯನೆಂಬ ರಾಜನು ಚಕ್ರವರ್ತಿಯಾಗಿ ರಾಜ್ಯಪಾಲನೆ ಮಾಡಿಕೊಂಡಿದ್ದನು. ಅವನಿಗೆ ರುಚಿ ಎಂಬ ತಪಃಶಾಲಿಯಾದ ಪುರೋಹಿತನಿದ್ದನು.

ಆ ರಾಜನಿಗೆ ಆರು ಮಂದಿ ಹೆಂಡತಿಯರಿದ್ದರು. ನೂರು ಮಂದಿ ಕುಮಾರರಿದ್ದರು. ಕಟ್ಟಕಡೆಗೆ ನೂರ ಒಂದನೆಯವಳಾಗಿ ಪದ್ಮಾವತಿ ಎಂಬ ಕುಮಾರಿಯೂ ಇದ್ದಳು.

ಪದ್ಮಾವತಿ ಅಸಮಾನ ಸುಂದರಿಯಾಗಿದ್ದಳು. ಆವಳಿಗೆ ಯೌವನವು ಬರುತ್ತಲೇ ಅನರಣ್ಯ ರಾಜನು ತನ್ನ ಕುಮಾರಿಯ ಗುಣರೂಪಗಳಿಗೆ ತಕ್ಕ ವರನಾದ ರಾಜಕುಮಾರನನ್ನು ಅನ್ವೇಷಣೆ ಮಾಡತೊಡಗಿದನು. ಹೀಗಿರುವಾಗ ಒಂದು ದಿನ ಪದ್ಮಾವತಿ ತನ್ನ ಪರಿಚಾರಿಕೆಯರೊಂದಿಗೆ ನದಿಗೆ ಹೋಗಿ ಸ್ನಾನ ಮಾಡಿಕೊಂಡಿದ್ದಳು. ಆಗ ಪಿಪ್ಪಲಾದನೆಂಬ ಮಹಾಮುನಿ ಸ್ನಾನಕ್ಕಾಗಿ ಅಲ್ಲಿಗೇ ಬಂದನು. ಪಿಪ್ಪಲಾದನು ಸಾಮಾನ್ಯ ಮುನಿಯಾಗಿರಲಿಲ್ಲ. ದಧೀಚಿ ಮಹಾಮುನಿಯ ಮಗ.

ಅಂತಹ ಪಿಪ್ಪಲಾದ ಮುನಿ ಪದ್ಮಾವತಿಯ ಅಂದಚೆಂದಗಳನ್ನು ನೋಡಿ ಮೋಹಗೊಂಡನು. ಅವನು ಸೀದಾ ಅನರಣ್ಯನ ಬಳಿಗೆ ಹೋಗಿ, ತನಗೆ ಪದ್ಮಾವತಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ರಾಜನನ್ನು ಕೇಳಿದನು.

ರಾಜನ ಬಾಯಿಯಿಂದ ಮಾತೇ ಹೊರಡಲಿಲ್ಲ. ರತೀದೇವಿಯಂತಹ ತನ್ನ ಕುಮಾರಿಯನ್ನು ಮನ್ಮಥನಂತಹ ಯಾವ ರಾಜಕುಮಾರನಿಗೋ ಕೊಡಬೇಕೆಂದುಕೊಂಡರೆ ಎಲ್ಲಿಂದಲೋ ಈ ಮುದುಕ ಮುನಿ ಕಿತ್ತು ಬಿದ್ದಿದ್ದಾನೆ! "ನನ್ನ ಮಗಳನ್ನು ನಿಮಗೆ ಕೊಡಲಾರೆನು" ಎಂದು ಖಂಡತುಂಡಾಗಿ ಹೇಳಿಬಿಟ್ಟರೆ, ಕೆಟ್ಟ ಶಾಪ ಕೊಟ್ಟು ವಂಶ ನಿರ್ಮೂಲ ಮಾಡಿದರೂ ಮಾಡಿದನೇ!

ಹೀಗೆ ರಾಜನು ಸಂಶಯಾವಸ್ಥೆಯಲ್ಲಿ ಹೊಡೆದುಕೊಳ್ಳುತ್ತಿರಲು, ರಾಜ ಪುರೋಹಿತರೂ, ಮಂತ್ರಿಗಳೂ ಅನರಣ್ಯ ರಾಜನಿಗೆ ಧೈರ್ಯ ಬರುವಂತೆ ಒಂದು ಆಲೋಚನೆಯನ್ನು ಹೇಳಿದರು.






ಕುಮಾರಿಯು ವಿವಾಹದ ವಿಷಯದಲ್ಲಿ ಸಂಶಯಾವಸ್ಥೆಯಲ್ಲಿರುವ ಅನರಣ್ಯನಿಗೆ, ಮಂತ್ರಿಗಳು ಈ ರೀತಿಯಾಗಿ ಆಲೋಚನೆ ಹೇಳಿದರು :

"ಮಹಾರಾಜಾ, ಪದ್ಮಾವತಿಯಂತಹ ಸ್ತ್ರೀ, ಈ ಮಹಾಮುನಿಯಂತಹವನನ್ನು ಮದುವೆಯಾಗಲು ಬಯಸಬಹುದು. ಏಕೆಂದರೆ ಈತನು ದೊಡ್ಡ ವಂಶದಲ್ಲಿ ಹುಟ್ಟಿದವನು. ಕುಲಕ್ಕೇ ಶ್ರೇಷ್ಠನಾಗಿರುವವನು. ಅಂತಹ ಮಹನೀಯನಿಗೆ ಕನ್ಯೆಯನ್ನು ದಾನಮಾಡುವುದು ಬಹುದೊಡ್ಡ ಸತ್ಕಾರ್ಯವಾಗಿದೆ. ಶುಭಕಾರ್ಯವೂ ಹೌದು. ಈತನನ್ನು ಪದ್ಮಾವತಿಗೆ ತೋರಿಸಿ, ಆಕೆ ವಿವಾಹಕ್ಕೆ ಅಂಗೀಕರಿಸಿದ ಪಕ್ಷದಲ್ಲಿ ಹಾಗೆಯೇ ವಿವಾಹ ಮಾಡಿಬಿಡುವುದೇ ಒಳ್ಳೆಯದು. ಅವಳು ಒಪ್ಪದೇಹೋದ ಪಕ್ಷದಲ್ಲಿ ಈ ಮುನೀಶ್ವರನು ಹೊರಟುಹೋಗುವನೆಂದು ನಂಬೋಣ."

ಈ ಸಲಹೆಯನ್ನು ಕೇಳಿ ಅನರಣ್ಯನಿಗೆ ದೊಡ್ಡ ಚಿಂತೆಯ ಭಾರ ಹಗುರಾದಂತೆ ತೋರಿತು. ಪಿಪ್ಪಲಾದ ಮಹಾಮುನಿಯನ್ನು ನೋಡಿ ಪದ್ಮಾವತಿ ಆತನನ್ನು ವರಿಸಲು ತನ್ನ ಅಂಗೀಕಾರವನ್ನು ತಿಳಿಸಿದಳು. ಮಗಳ ಒಪ್ಪಿಗೆಯನ್ನು ತಿಳಿದು ಅನರಣ್ಯರಾಜನು ಬಹಳ ಸಂತೋಷದಿಂದ ಅವರಿಬ್ಬರನ್ನು ಹೊಂದಿಸಿ ವಿವಾಹಮಾಡಿ ದೊಡ್ಡ ಕೀರ್ತಿ ಸಂಪಾದಿಸಿಕೊಂಡನು.

ವಿವಾಹವಾದ ಮೇಲೆ ಪಿಪ್ಪಲಾದನು ಪದ್ಮಾವತಿಯನ್ನು ತನ್ನೊಂದಿಗೆ ಕರೆದುಕೊಂಡು ಋಷ್ಯಾಶ್ರಮಕ್ಕೆ ಹೋದನು. ಕುಮಾರಿಯ ಮೇಲಿನ ಪ್ರೇಮದಿಂದ ಅನರಣ್ಯನು ಕೂಡಾ, ತನ್ನ ರಾಜ್ಯವನ್ನು ಹಿರಿಯ ಮಗನಿಗೆ ಒಪ್ಪಿಸಿ, ತನ್ನ ಐದು ಮಂದಿ ಪತ್ನಿಯರನ್ನೂ ಕರೆದುಕೊಂಡು ಕುಮಾರಿ ಇರುವ ಪ್ರದೇಶಕ್ಕೇ ಹೋಗಿ ವಾನಪ್ರಸ್ಥಾಶ್ರಮ ಸ್ವೀಕರಿಸಿಕೊಂಡನು.

ಒಂದುದಿನ ಪದ್ಮಾವತಿ ಸ್ನಾನಮಾಡಲು ನದಿಗೆ ಹೋದಾಗ, ಧರ್ಮದೇವನು ನವಮನ್ಮಥನಂತಹ ಯುವಕನ ರೂಪದಲ್ಲಿ ಅವಳ ಹತ್ತಿರ ಬಂದು,



"ಸುಂದರೀ, ನಿನ್ನ ಈ ಸೌಂದರ್ಯಕ್ಕೆ ತಕ್ಕವನಾದ ಗಂಡನು ನಾನೇ. ಆ ಮುದಕ ಗಂಡನೊಂದಿಗೆ ಸಂಸಾರ ಸಾಗಿಸುತ್ತ, ನಿನ್ನ ಯೌವನವನ್ನು ಅರಣ್ಯ ದಲ್ಲಿ ಸುರಿದ ಬೆಳುದಿಂಗಳ ಹಾಗೆ ಹಾಳುಮಾಡದೆ, ನನ್ನೊಂದಿಗೆ ನನ್ನ ರಾಜ್ಯಕ್ಕೆ ಬಂದು ಮಹಾರಾಣಿ ಯಾಗಿ ಸಂತೋಷದಿಂದ ಬದುಕು. ನಡೆ, ಹೋಗೋಣ" ಎಂದನು.

ಅದನ್ನು ಕೇಳಿ ಪದ್ಮಾವತಿ ಅತ್ಯಂತ ಆಗ್ರಹಾ ವೇಶಗೊಂಡು, "ಮೋಹಾಂಧನೇ! ನನ್ನ ಪತಿ ಯನ್ನು ನಿಂದಿಸಿದ ನೀನು ಕ್ಷಯಿಸಿ ಹೋಗು" ಎಂದು ಶಪಿಸಿಬಿಟ್ಟಳು.

ಧರ್ಮದೇವನು ಬೆದರಿಬಿದ್ದು, "ಅಮ್ಮಾ, ನಾನು ಯಾವ ರಾಜನೂ ಅಲ್ಲ. ಧರ್ಮದೇವನು. ನಿನ್ನ ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದೆನು. ನನ್ನನ್ನು ಮನ್ನಿಸಿ ಶಾಪವನ್ನು ಉಪಸಂಹರಿಸಿಕೋ" ಎಂದು ಬೇಡಿಕೊಂಡನು.

ಪದ್ಮಾವತಿ ಕೂಡಾ ಕೋಪದಿಂದ ದುಡುಕಿ ಶಪಿಸಿ ದುದಕ್ಕೆ ನೊಂದುಕೊಂಡು, "ಶಾಪವನ್ನು ಉಪ ಸಂಹರಿಸಿಕೊಳ್ಳಲು ನನಗೆ ಸಾಧ್ಯವಿಲ್ಲವಲ್ಲಾ! ಆದರೆ ಒಮ್ಮೆಲೇ ನಿನಗೆ ಆ ಶಾಪವು ಫಲಿಸದಿರಲಿ. ನಿನಗೆ ನಾಲ್ಕು ಪಾದಗಳೆಂದು ಭಾವಿಸಿ ಒಂದೊಂದು ಯುಗ ದಲ್ಲಿ ಒಂದೊಂದು ಪಾದವನ್ನು ಕಳೆದುಕೊಳ್ಳುತ್ತ, ಸಂಚರಿಸಿಕೊಂಡಿರು ಧರ್ಮದೇವಾ" ಎಂದಳು.

ವಸಿಷ್ಠನು ಹೀಗೆ ಪದ್ಮಾವತಿಯ ಕಥೆಯನ್ನು ಹೇಳಿ, "ಮೇನಕಾ, ಹಿಮವಂತರೇ! ನೀವು ಕೂಡಾ ಅನರಣ್ಯನು ಮಾಡಿದ ಹಾಗೆಯೇ, ನಿಮ್ಮ ಕುಮಾರಿಯ ಇಷ್ಟದಂತೆಯೇ ಆ ಪರಮ ಶಿವನಿಗೆ ಕೊಟ್ಟು ಮದುವೆ ಮಾಡಿ ನಿಶ್ಚಿಂತರಾಗಿಬಿಡಿರಿ" ಎಂದನು.

ಈಗ ಮೇನಕಾ ಹಿಮವಂತರು ತೃಪ್ತರಾದರು. ಮೈನಾಕನೇ ಮೊದಲಾದ ಬಂಧುಗಳೆಲ್ಲರೂ ಶಿವ ಪಾರ್ವತಿಯರ ವಿವಾಹಕ್ಕೆ ಸುಮುಖರಾದರು.

ಆಗ ಮೇನಕಾ ಹಿಮವಂತರು ಪಾರ್ವತಿಯನ್ನು ಅರುಂಧತೀ ವಸಿಷ್ಠರ ಕೈಗಳಲ್ಲಿಟ್ಟು, "ನಿಮ್ಮ ಇಷ್ಟ ಪ್ರಕಾರವೇ ಈ ಹುಡುಗಿಯನ್ನು ಶಿವನಿಗೆ ಕೊಟ್ಟು ವಿವಾಹ ಮಾಡೋಣ. ವಿವಾಹಕ್ಕೆ ತಕ್ಕ ಮುಹೂರ್ತ ವನ್ನು ನಿಶ್ಚಯಿಸಿ ಹೇಳಬೇಕು" ಎಂದರು.

ಅರುಂಧತಿ ಪಾರ್ವತಿಯನ್ನು ಲೋಕಮಾತೆ ಯಾಗುವಂತೆ ಆಶೀರ್ವಾದ ಮಾಡಿದಳು. ಮಾಘ ಶುದ್ಧ ಏಕಾದಶಿಯ ದಿನ. ಆರ್ದ್ರಾ ನಕ್ಷತ್ರದಲ್ಲಿ ವೃಶ್ಚಿಕ ಲಗ್ನದಲ್ಲಿ ಬೆಳಂಜಾಮದಲ್ಲಿ ಮುಹೂರ್ತ ವೆಂದು ನಿಶ್ಚಯಿಸಲ್ಪಟ್ಟಿತು. ಶಿವಪಾರ್ವತಿಯರ ವಿವಾಹವು ನಿಶ್ಚಯವಾದುದನ್ನು ತಿಳಿದು ಎಲ್ಲರಿಗೂ ಸಂತೋಷವಾಯಿತು.

ಇಷ್ಟು ತಿಳಿದ ಮೇಲೆ ಸಪ್ತ ಮಹರ್ಷಿಗಳು ಶಿವನ ಬಳಿಗೆ ಹಿಂದಿರುಗಿ ಬಂದು, ಹೋದ ಕೆಲಸವು ಶುಭಕರವಾಗಿ ಅನುಕೂಲವಾಯಿತೆಂದು ಹೇಳಿದರು.

ಮುಂದಿನ ಕೆಲಸಗಳಿಗಾಗಿ ಬ್ರಹ್ಮ, ವಿಷ್ಣು, ಇಂದ್ರಾದಿಗಳನ್ನು ನಿಯಮಿಸುವಂತೆ ಹೇಳಿ ಸಪ್ತರ್ಷಿಗಳು ಹೊರಟು ಹೋದರು.



ಪಾರ್ವತಿಯ ವಿವಾಹಕ್ಕೆ ಬೇಕಾದ ಏರ್ಪಾಟುಗಳೆಲ್ಲಾ ಸಂಪ್ರದಾಯಬದ್ಧವಾಗಿ ನಡೆಯತೊಡಗಿತು. ಹಿಮವಂತನು ತನ್ನ ಮಂತ್ರಿಗಳ ಮೂಲಕ ಮಾಡಬೇಕಾದುದನ್ನೆಲ್ಲಾ ಮಾಡಿಸಿದನು, ಬಂಧು ಬಳಗದವರಿಗೆ ಶುಭಾಹ್ವಾನಗಳು ಹೋದವು. ಪಾರ್ವತಿಯನ್ನು ಮದುಮಗಳನ್ನಾಗಿ ಮಾಡಲು ಪಟ್ಟಣದೊಳಗಿನ ಮುತ್ತೈದೆಯರೆಲ್ಲರೂ ಬಂದು ಸೇರಿದರು.

ಶುಭ ಮುಹೂರ್ತ ನೋಡಿ ಪಾರ್ವತಿಗೆ ಮಂಗಳ ಸ್ನಾನಮಾಡಿಸಿದರು. ಪಟ್ಟೆಯ ಸೀರೆಯನ್ನು ಉಡಿಸಿದರು. ಆಭರಣಗಳಿಂದ ಅಲಂಕರಿಸಿದರು. ಕಸ್ತೂರಿಯ ತಿಲಕವಿಟ್ಟು ಹೂಮುಡಿಸಿ ಜಲ್ಲಿ ಬಿಟ್ಟರು. ಪುನುಗು, ಜವ್ವಾದಿ, ಹರಿಚಂದನಗಳನ್ನು ಪೂಸಿದರು. ಅಂದವಾದ ಪುಷ್ಪಹಾರವನ್ನು ಕೊರಳಿಗೆ ಹಾಕಿ ಪಾರ್ವತಿಯನ್ನು ಮದುಮಗಳನ್ನಾಗಿ ಮಾಡಿದರು.

ಪಾರ್ವತೀ ಕಲ್ಯಾಣಕ್ಕಾಗಿ ಕಳುಹಿಸಲ್ಪಟ್ಟ ಆಹ್ವಾನದಂತೆ ಹಿಮವಂತನ ಬಂಧುಮಿತ್ರ ಬಳಗದವರೆಲ್ಲಾ ಸಕುಟುಂಬ ಪರಿವಾರದೊಂದಿಗೆ ಬಂದು ಕೂಡಿದರು. ಅವರು ತಮ್ಮೊಂದಿಗೆ ಬಂಗಾರದ ತಾವರೆ ಪುಷ್ಪಗಳನ್ನೂ, ಮುತ್ತು ಹವಳ, ಮಾಣಿಕ್ಯಗಳನ್ನೂ ಕಾಣಿಕೆಗಳಾಗಿ ತಂದರು. ಬೇರೆ ಪರ್ವತಗಳ ರಾಜರು ನವರತ್ನಗಳನ್ನೂ, ಚಂದನ ಮೊದಲಾದ ಸುಗಂಧ ದ್ರವ್ಯಗಳನ್ನೂ, ಮದ್ದಾನೆಗಳನ್ನೂ, ಸೈಂಧವಾಶ್ವಗಳನ್ನೂ ಉಡುಗೊರೆ ಕೊಡಲು ತಂದರು. ಹಿಮವಂತನು ಆ ಕಾಣಿಕೆಗಳನ್ನೆಲ್ಲಾ ಸ್ವೀಕರಿಸಿ, ಅತಿಥಿಗಳಿಗೆ ಗೌರವ ಮರ್ಯಾದೆಗಳನ್ನು ಚೆನ್ನಾಗಿ ಸಲಿಸಿದನು. ಬಂದವರಿಗೆಲ್ಲಾ ಸಕಲ ಸೌಕರ್ಯಗಳಿಂದ ಕೂಡಿದ ಬಿಡದಿಗಳನ್ನು ಏರ್ಪಡಿಸಿಕೊಟ್ಟನು. ಅನ್ನದಾನಗಳೂ, ಭೂರಿ ಭೋಜನಗಳೂ ಧಾರಾಳವಾಗಿ ನಡೆಯುವಂತೆ ಮಾಡಿದನು. ಎಲ್ಲಿ ನೋಡಿದರೂ ಸಂತೋಷ, ಸಂಭ್ರಮ, ಸಡಗರ.

ಬಂದವರಿಗೆಲ್ಲ ಬಿಡದಿಗಳ ನಿರ್ಮಾಣಕ್ಕೂ, ಕಲ್ಯಾಣ ಮಂಟಪವನ್ನು ನಿರ್ಮಿಸಲಿಕ್ಕೂ ಹಿಮವಂತನು ವಿಶ್ವಕರ್ಮನ ಸಹಾಯವನ್ನು ಪಡೆದಿದ್ದನು. ಹತ್ತು ಸಾವಿರ ಯೋಜನ ವಿಸ್ತಾರ ಸ್ಥಳದಲ್ಲಿ ಕಲ್ಯಾಣ ಮಂಟಪವು ನಿರ್ಮಾಣಗೊಂಡಿತ್ತು. ಹಿಮವಂತನಿರುವ ಓಷಧೀಪುರವು ಅತ್ಯದ್ಭುತವಾಗಿ ಅಲಂಕರಿಸಲ್ಪಟ್ಟಿತು.

ಕೈಲಾಸದಲ್ಲಿ ಶಿವನು ಹಿಮವಂತನು ಕಳುಹಿಸಿದ ಲಗ್ನಪತ್ರಿಕೆಯನ್ನು ಪಡೆದುಕೊಂಡು, ಸಂತೋಷದಿಂದ ವಾಯುದೇವನನ್ನು ಕಳುಹಿಸಿ, ನಾರದನನ್ನು ಬರಮಾಡಿಕೊಂಡನು. ಶಿವನು ನಾರದನನ್ನು ನೋಡಿ, "ನಾರದಾ, ಇನ್ನು ಐದು ದಿನಗಳಲ್ಲಿ ನನಗೆ ಹಿಮ



ವಂತನ ಕುಮಾರಿ ಪಾರ್ವತಿಯೊಂದಿಗೆ ವಿವಾಹವಾಗುತ್ತದೆ. ವ್ಯವಧಿ ಸ್ವಲ್ಪ ಮಾತ್ರವೇ ಇದೆ. ನೀನು ಕಾಮಗಮನ ಉಳ್ಳವನಾದುದರಿಂದ, ಮೂರು ಲೋಕಗಳಲ್ಲಿರುವವರನ್ನೆಲ್ಲಾ ಈ ವಿವಾಹಕ್ಕೆ ಆಹ್ವಾನಿಸುವ ಕೆಲಸವನ್ನು ನಿನಗೆ ಕೊಡುತ್ತೇನೆ. ಕುಬೇರನೇ ಮೊದಲಾದವರೊಂದಿಗೆ ಮದುವೆಗೆ ಏನೇನು ಸಾಮಗ್ರಿಗಳು ಬೇಕೋ ಅವನ್ನೆಲ್ಲಾ ತರಲಿಕ್ಕೆ ಅವರವರಿಗೆ ಹೇಳಿಬಿಡು. ನಾನು ಕೇವಲ ಬೋಲಾಶಂಕರನಾದುದರಿಂದ, ಎಲ್ಲರೂ ಸೇರಿಯೇ ನನಗೆ ಮದುವೆ ಮಾಡಿಸಬೇಕಾಗಿದೆ" ಎಂದು ಹೇಳಿದನು.

ನಾರದನು ಸಂತೋಷದಿಂದ ಒಪ್ಪಿಕೊಂಡು ಶಿವನ ಅಪ್ಪಣೆ ಪಡೆದು ಹೊರಟನು. ಬ್ರಹ್ಮ, ವಿಷ್ಣು ದೇವೇಂದ್ರಾದಿಗಳೊಂದಿಗೂ, ಭೂಲೋಕ ನಾಗ ಲೋಕಗಳಲ್ಲಿರುವವರೊಂದಿಗೂ "ಮಾಘ ಶುದ್ಧ ಏಕಾದಶಿಯ ದಿನ ಬೆಳಂಜಾಮದ ಶುಭಮುಹೂರ್ತದಲ್ಲಿ ಶಿವಪಾರ್ವತಿಯರಿಗೆ ಓಷಧೀಪುರದಲ್ಲಿ ವಿವಾಹ ನಡೆಯಲಿದೆ, ನೀವೆಲ್ಲರೂ ಬಂದು ನಡೆಯಿಸಿ ಕೊಡಬೇಕೆಂದು ಶಿವನು ಆಹ್ವಾನಿಸುತ್ತಾನೆ" ಎಂದು ನಾರದನು ಕರೆಕೊಟ್ಟನು. ಆಮೇಲೆ ನಾರದನು ಕುಬೇರನನ್ನು ಕರೆದುಕೊಂಡು, ಅವನಿಂದ ಮದುವೆಗೆ ಬೇಕಾದ ವಸ್ತು ಸಾಮಗ್ರಿಗಳನ್ನೂ ಸಾಗಿಸಿಕೊಂಡು ಕೈಲಾಸಕ್ಕೆ ತಿರುಗಿ ಬಂದನು.

ಹೀಗೆ ಶಿವನಿಂದ ಆಹ್ವಾನಿಸಲ್ಪಟ್ಟ ಬ್ರಹ್ಮನು ಪುರೋಹಿತನಾಗಿ ಬಂದನು. ವಿಷ್ಣು ಬಾವಯ್ಯನ ಪಾತ್ರ ವಹಿಸಿದನು. ಇಂದ್ರಾದಿ ದೇವತೆಗಳೂ ಋಷಿಗಳೂ ವಿವಾಹ ಮಹೋತ್ಸವದ ಸದಸ್ಯರಾಗಿರುವಂತೆ ನಿರ್ಣಯಿಸಲ್ಪಟ್ಟರು. ಆ ಮುಹೂರ್ತ ಸಂದರ್ಭದಲ್ಲಿ ಗರುಡ, ಗಂಧರ್ವ, ಯಕ್ಷಸ್ತ್ರೀಯರೂ, ಸಪ್ತ ಮಾತೃಕೆಯರೂ, ಲಕ್ಷ್ಮಿ, ಸರಸ್ವತಿ, ಶಚೀ, ಅರುಂಧತಿಯರಂತಹ ಮಹಾ ಪತಿವ್ರತೆಯರೂ ಶಿವನಿಗೆ ಮಂಗಳಾಭಿಷೇಕ ಮಾಡಲು ಬೃಹಸ್ಪತಿ ಮುಹೂರ್ತವಿಟ್ಟು ಹೇಳಿದನು. ಆ ಮುಹೂರ್ತದಲ್ಲಿ ಗರುಡ, ಗಂಧರ್ವಸ್ತ್ರೀಯರು ಮೊದಲು ಶಿವನಿಗೆ ಸ್ನಾನಮಾಡಿಸಿದರು. ಅನಂತರ ಕ್ರಮವಾಗಿ ಯಕ್ಷಸ್ತ್ರೀಯರೂ, ಸಪ್ತಮಾತೃಕೆಯರೂ, ಲಕ್ಷ್ಮಿ, ಸರಸ್ವತಿ, ಶಚೀ ಮೊದಲಾದ ದೇವತಾ ಸ್ತ್ರೀಯರೂ, ಶಿವನಿಗೆ ಮಂಗಳಾಭಿಷೇಕ ಮಾಡಿದರು. ಹರಿಚಂದನಾದಿಗಳನ್ನು ಪೂಸಿ, ಶಿವನನ್ನು ಮದುಮಗನನ್ನಾಗಿ ಅಲಂಕರಿಸಿದರು. ಗೌತಮ, ಅತ್ರಿ, ಭೃಗು ಮೊದಲಾದ ಮಹರ್ಷಿಗಳು ಶಿವನ ಬಲಗೈಗೆ ಶಾಸ್ತ್ರೋಕ್ತವಾಗಿ ದೀಕ್ಷಾಬಂಧವನ್ನು ಕಟ್ಟಿ, ನವಗ್ರಹ ಪೂಜೆಗಳನ್ನು ಮಾಡಿಸಿದರು. ಬ್ರಾಹ್ಮಣರಿಗೆ ದಾನಗಳನ್ನು ಕೊಡಿಸಿದರು.

ತರುವಾಯ ಬ್ರಹ್ಮನ ಆದೇಶದಂತೆ ಶಿವನು ತನ್ನ ಕಡೆಯವರನ್ನೆಲ್ಲಾ ಕಲೆತುಕೊಂಡು, ಮಂಗಳ ವಾದ್ಯಗಳು ಮೊಳಗುತ್ತಿರಲು, ನೃತ್ಯಗೀತಗಳು ನಡೆ

ಯುತ್ತಿರಲು ಓಷಧೀಪುರಕ್ಕೆ ದಿಬ್ಬಣ ಹೊರಟಿತು. ಕೈಲಾಸದ ರಕ್ಷಣೆಗಾಗಿ ರುದ್ರಗಣನಾಯಕರುಗಳನ್ನಿರಿಸಿ, ಉಳಿದ ಪ್ರಮಥಗಣಗಳನ್ನೆಲ್ಲಾ ಹೊರಡಿಸಿಕೊಂಡು ನಂದೀಶ್ವರನು ದಿಬ್ಬಣದೊಂದಿಗಿದ್ದನು. ವೀರಭದ್ರನೂ, ಚಂಡೀಶ್ವರನೂ, ಭೈರವನೂ ತಮ್ಮ ತಮ್ಮ ವಾಹನಗಳ ಮೇಲೆ ಹೊರಟರು.

ಮದುಮಗನಾದ ಶಿವನನ್ನು ಅಲಂಕರಿಸಲ್ಪಟ್ಟ ಐರಾವತದ ಮೇಲೆ ಕೂಡಿಸಿದ್ದರು. ಬ್ರಹ್ಮನು ಸರಸ್ವತಿಯೊಂದಿಗೆ ಹಂಸದ ಮೇಲೆ ಹೊರಟಿದ್ದನು. ಗರುಡನ ಮೇಲೆ ವಿಷ್ಣುವೂ, ಲಕ್ಷ್ಮಿಯೂ ಅಲಂಕೃತರಾಗಿದ್ದರು. ಶಚಿಯೂ ಇಂದ್ರನೂ ಕದಲುವ ರೆಕ್ಕೆಯ ಸಿಂಹಾಸನದ ಮೇಲೆ ಏರಿಕೊಂಡಿದ್ದರು. ಕುಬೇರನು ನವನಿಧಿಗಳೊಂದಿಗೆ ಶಿವನ ಹಿಂದೆಯೇ ಕುಳಿತಿದ್ದನು. ದೇವತಾ ಸ್ತ್ರೀಯರೂ, ಋಷಿಪತ್ನಿಯರೂ ದಿವ್ಯ ವಸ್ತ್ರಗಳನ್ನೂ, ಸುಗಂಧ ದ್ರವ್ಯಗಳನ್ನೂ ತೆಗೆದುಕೊಂಡಿದ್ದರು. ಅವರೆಲ್ಲಾ ಪ್ರತ್ಯೇಕ ವಿಮಾನದ ಮೇಲೆ ಸಾಗುತ್ತಿದ್ದರು.

ಹೀಗೆ ಪರಮ ವೈಭವದಿಂದ ಗಂಡಿನ ದಿಬ್ಬಣವು ನಗರವನ್ನು ಸಮೀಪಿಸುತ್ತಿರಲು, ಹಿಮವಂತನು ತನ್ನ ಪುರೋಹಿತನಾದ ಗರ್ಗ ಮಹಾ ಮುನಿಯನ್ನೂ, ಮೇನಕೆಯನ್ನೂ, ಕುಮಾರರನ್ನೂ ಕರೆದುಕೊಂಡು ಮೇಳತಾಳಗಳಿಂದ ಇದಿರಾಗಿ ಬಂದು, ಬ್ರಹ್ಮ, ವಿಷ್ಣು, ದೇವೇಂದ್ರಾದಿಗಳಿಗೂ ಋಷಿಗಳಿಗೂ ನಮಸ್ಕಾರ ಮಾಡಿ, ಶಿವನ ಮುಂದೆ ಕೈ ಮುಗಿದು ನಿಂತುಕೊಂಡು, "ಸರ್ವೇಶ್ವರನಾದ ನಿನ್ನ ಅನುಗ್ರಹದಿಂದಾಗಿ ನಾನು ದೊಡ್ಡವನಾದೆನು. ಮದುಮಗನಾಗಿ ನನ್ನ ಮನೆಗೆ ಬಂದಿರುವ ನಿನಗೆ ಸುಸ್ವಾಗತ. ನಿನಗೆ ನನ್ನ ಕುಮಾರಿಯನ್ನು ಧಾರೆ ಎರೆದು ಕೊಡುತ್ತೇನೆ. ನೀನು ಅವಳನ್ನು ವಿವಾಹ ಮಾಡಿಕೊಂಡು ನನ್ನ ವಂಶವು ಪವಿತ್ರವಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.



ಅವನು ಶಿವನನ್ನು ಕೈ ಹಿಡಿದು ಕರೆದು ತಂದು, ಪಟ್ಟೆ ವಸ್ತ್ರಗಳನ್ನೂ, ಗಂಧಪುಷ್ಪ ತಾಂಬೂಲಗಳನ್ನೂ ಕೊಟ್ಟು, ಉಳಿದೆಲ್ಲರಿಗೂ ಹಾಲು ಮತ್ತು ಸವಿಯಾದ ಪಾನೀಯಗಳನ್ನು ಕೊಡಿಸಿದನು. ಶ್ರಮ ನಿವಾರಣೆಗಾಗಿ ಎಲ್ಲರಿಗೂ ಸೊಗಸಾಗಿ ಚಾಮರ ಸೇವೆ ಮಾಡಿಸಿದನು.

ಹಿಮವಂತನ ಪಕ್ಷದ ಸ್ತ್ರೀಯರು ಶಿವನನ್ನು ನೋಡಿ, "ನಮ್ಮ ಪಾರ್ವತಿ ಅದೃಷ್ಟವಂತೆಯೇ ಸರಿ. ಕೋಟಿ ಮನ್ಮಥರಿಗೆ ಸಮಾನನಾದ ಗಂಡನು ಅವಳಿಗೆ ಲಭಿಸಿದನು. ಅವಳ ಪುಣ್ಯ ಎಷ್ಟು ದೊಡ್ಡದೋ!" ಎಂದುಕೊಂಡರು. ಮೇನಕೆ ಶಿವನ ಮುಂದೆ ಕೈಗಳನ್ನು ಮುಗಿದು, "ಸದಾಶಿವಾ, ಯಾರೋ ಅಜ್ಞಾನಿಗಳು ಹೇಳಿದ ಮಾತುಗಳನ್ನು ಕೇಳಿ, ನಿನ್ನ ಮೇಲೆ ಸಂದೇಹ ತಾಳಿದ್ದುಂಟು, ನಿಂದಿಸಿದ್ದುಂಟು. ನಮ್ಮ ತಪ್ಪುಗಳನ್ನು ಮನ್ನಿಸಿ ನಮ್ಮ ಮನೆಗೆ ಬಂದು, ನಾವು ಮಾಡುವ ವರಪೂಜೆಗಳನ್ನು



ಸ್ವೀಕರಿಸಿ, ನಮ್ಮ ಪಾರ್ವತಿಯನ್ನು ವಿವಾಹ ಮಾಡಿಕೊಳ್ಳಬೇಕು" ಎಂದು ಪ್ರಾರ್ಥಿಸಿದಳು. ದೊಡ್ಡ ಮುತ್ತೈದೆಯರು ಬಂದು ಪದ್ಧತಿಯಂತೆ ಶಿವನನ್ನು ಹರಸಿದರು.

ದಾರಿಯುದ್ದಕ್ಕೂ ಪುಷ್ಪಗಳು ಚೆಲ್ಲಲ್ಪಟ್ಟವು. ಮುತ್ತುಗಳನ್ನೂ, ಅಕ್ಷತೆಗಳನ್ನೂ ಚೆಲ್ಲಿದರು. ಹೀಗೆ ಶಿವನನ್ನು ಕರೆದುಕೊಂಡು ಮೇನಕಾ ಹಿಮವಂತರು ಮಂಟಪಕ್ಕೆ ಪ್ರವೇಶ ಮಾಡಿಸಿ, ವರಪೂಜೆ ಮಾಡಿದರು. ಮದುಮಗನೊಂದಿಗೆ ಬಂದ ಮಹಾ ಪರಿವಾರದವರಿಗೆ ಯಾವ ಕೊರತೆಯೂ ಬಾರದಂತೆ ಉಳಿದವರು ನೋಡಿಕೊಳ್ಳುತ್ತಿದ್ದರು.

ಕುಲಾಚಾರದಂತೆ ಪಾರ್ವತಿ ಅಂಬಿಕಾಲಯಕ್ಕೆ ಹೋಗಿ ಆ ದೇವಿಯನ್ನು ಪೂಜಿಸಿದಳು. ಆಮೇಲೆ ಮುತ್ತೈದೆಗಳಿಗೆಲ್ಲ ಬಟ್ಟೆ ಬಾಗಿನಗಳನ್ನು ಕೊಟ್ಟಳು. ಬಳಿಕ ಅವಳ ಹಿಂದೆ ಮುತ್ತೈದೆಗಳ ಪರಿವಾರವಿರಲು, ಪಾರ್ವತಿ ಪಲ್ಲಕಿಯನ್ನೇರಿದಳು. ಆಗ ದೇವತೆಗಳು ಅವಳನ್ನು ನೋಡಿ, "ಇವಳು ಪರದೇವತೆಯೇ ನಿಜ. ಇವಳ ಈ ದಿವ್ಯವಿವಾಹದಿಂದ ನಮ್ಮ ಕಷ್ಟಗಳೆಲ್ಲಾ ತೀರಿ ಹೋಗುತ್ತವೆ" ಎಂದುಕೊಂಡರು.

ಮುಹೂರ್ತದ ವೇಳೆ ಸಮೀಪಿಸುತ್ತಿರುವಾಗ ಪಾರ್ವತಿ ಅಂಬಿಕೆಯ ಪೂಜೆ ಮುಗಿಸಿ ಕಲ್ಯಾಣ ಮಂಟಪವನ್ನು ಸಮೀಪಿಸುತ್ತಿರಲು, ಶಿವನನ್ನು ಐರಾವತದ ಮೇಲೆ ಕೂಡಿಸಿ ಅಲ್ಲಿಗೆ ಕರೆದುಕೊಂಡು ಬಂದರು. ಮೊದಲು ಶಿವನನ್ನು ಕಲ್ಯಾಣ ಮಂಟಪದೊಳಗಿನ ಪೀಠದಲ್ಲಿ ಪುರೋಹಿತರು ಕೂಡಿಸಿದರು. ಮೇನಕಾ ಹಿಮವಂತರು ಅಳಿಯನ ಕಾಲುತೊಳೆದು, ಆ ನೀರನ್ನು ತಮ್ಮ ತಲೆಗೆ ತಳಿದುಕೊಂಡರು. ಆಮೇಲೆ ಉಭಯ ಪಕ್ಷಗಳ ಪುರೋಹಿತರುಗಳು ಮೇನಕಾ ಹಿಮವಂತರಿಂದ ಕನ್ಯಾದಾನ ಮಾಡಿಸಿದರು. ಶಿವಪಾರ್ವತಿಯರು ಪರಸ್ಪರ ಮಾಲೆ ಹಾಕಿಕೊಂಡರು. ಶಿವನ ಕೈಯಲ್ಲಿ ಪಾರ್ವತಿಯ ಕೈ ಸೇರಿ ಪಾಣಿಗ್ರಹಣವಾಯಿತು.

ಹೀಗೆ ಶಿವಪಾರ್ವತಿಯರ ವಿವಾಹವು ಅತ್ಯಂತ ವೈಭವದಿಂದ ನೆರವೇರಿತು. ಊಟ ಉಪಚಾರಗಳೆಲ್ಲಾ ಆದ ಮೇಲೆ ದೇವತೆಗಳು ಶಿವನ ಅನುಮತಿ ಪಡೆದು ತಮ್ಮ ತಮ್ಮ ನಿವಾಸಗಳಿಗೆ ಹೊರಟು ಹೋದರು. ಶಿವನು ಅನೇಕ ದಿನಗಳ ವರೆಗೆ ಹಿಮವಂತನ ಮನೆಯಲ್ಲೇ ಇರಬೇಕಾಯಿತು. ಹಿಮವಂತನ ಕಡೆಯವರು ಮಾಡುವ ಔತಣಗಳನ್ನು ಸ್ವೀಕರಿಸದೆ ಕೈಲಾಸಕ್ಕೆ ಹೋಗಲಾಗಲಿಲ್ಲ. ಆಮೇಲೆ ಶಿವನು ತಾನು ಪಾರ್ವತಿಯೊಂದಿಗೆ ಕೈಲಾಸಕ್ಕೆ ಹೊರಡುವೆನೆಂದು ನಂದೀಶ್ವರನ ಮೂಲಕ ಹಿಮವಂತನಿಗೆ ಹೇಳಿ ಕಳುಹಿಸಿದನು.

ಮೇನಕಾ ಹಿಮವಂತರು ಪಾರ್ವತಿಯನ್ನು ಶಿವನೊಂದಿಗೆ ಕಳುಹಿಸಲು ಸನ್ನಾಹ ಮಾಡತೊಡಗಿದರು, ಅವಳಿಗೆ ವಸ್ತ್ರಗಳನ್ನೂ, ಪರಿಚಾರಿಕೆಯರನ್ನೂ, ಗೃಹೋಪಕರಣಗಳನ್ನೂ, ಅವಳ ವಾಹನ

ವಾಗಿದ್ದ ಸಿಂಹವನ್ನೂ ಬಳವಳಿಯಾಗಿ ಶಿವನಿಗೆ ಸಮರ್ಪಿಸಿ, "ಪರಮೇಶ್ವರಾ, ಪಾರ್ವತಿಯನ್ನು ಪ್ರೇಮದಿಂದ ನೋಡಿಕೋ!" ಎಂದು ಕೇಳಿಕೊಂಡರು. ಹಿರಿಯ ಮುತ್ತೈದೆಯರು ಪಾರ್ವತಿಗೆ ಹೇಳಬೇಕಾದ ನೀತಿಗಳನ್ನು ಹೇಳಿದರು.

ಪಾರ್ವತೀ ಪರಮೇಶ್ವರರ ಪ್ರಯಾಣಕ್ಕೆ ಶುಭ ಮುಹೂರ್ತವಿಟ್ಟಿದ್ದರು. ಆ ದಿನ ಶಿವನು ಪಾರ್ವತಿಯೊಂದಿಗೆ ಕೈಲಾಸಕ್ಕೆ ಬಂದು, ಮಹರ್ಷಿಗಳ ಸಹಾಯದಿಂದ ಪಾರ್ವತಿಯೊಂದಿಗೆ ಗೃಹಪ್ರವೇಶ ಮಾಡಿದನು. ಆಮೇಲೆ ಮೂರು ದಿನಗಳ ವರೆಗೂ ಶಿವನ ಮನೆಯಲ್ಲಿ ಔತಣಗಳು ನಡೆದುವು. ಅದುವರೆಗೂ ಶಿವನೊಂದಿಗಿದ್ದ ಬ್ರಹ್ಮ, ವಿಷ್ಣು, ಕುಬೇರ ಮೊದಲಾದ ನಿಕಟವರ್ತಿಗಳು ಹೊರಟು ಹೋಗಲು ಶಿವನ ಅನುಜ್ಞೆ ಕೇಳಿದರು. ತನ್ನ ಆಹ್ವಾನದಂತೆ ಬಂದ ಅವರಿಗೆಲ್ಲಾ ಶಿವನು ತಕ್ಕ ಕಾಣಿಕೆಗಳನ್ನು ಕೊಟ್ಟು, ಗೌರವಿಸಿ ಕಳುಹಿಸಿ ಕೊಟ್ಟನು.

ಪಾರ್ವತಿಯ ಕಲ್ಯಾಣಕ್ಕೆ ಬಂದ ಅತಿಥಿಗಳೆಲ್ಲಾ ಹೊರಟು ಹೋದ ಮೇಲೆ, ಶಿವನು ನಂದೀಶ್ವರನನ್ನು ಬಳಿಗೆ ಕರೆದು, "ನಾನೂ ಪಾರ್ವತಿಯೂ ವಿಶ್ರಾಮ ಮಂದಿರದಲ್ಲಿ ಬಳಲಿಕೆ ತೀರಿಸಿಕೊಳ್ಳುತ್ತೇವೆ. ಆ ಮಂದಿರವನ್ನು ಬಹಳ ಚೆನ್ನಾಗಿ ಅಲಂಕರಿಸಿಡು" ಎಂದನು.

ನಂದೀಶ್ವರನು ತನ್ನ ಸಹಾಯಕ್ಕೆ ಗಣಾಧಿಪತಿಗಳನ್ನು ಇಟ್ಟುಕೊಂಡು ಮಹಾ ಸೌಧವನ್ನು ಪ್ರವೇಶಿಸಿದನು. ಇಡೀ ಸೌಧವನ್ನು ಶುಭ್ರಗೊಳಿಸಿ ಪನ್ನೀರಿನಿಂದ ತೊಳೆದನು. ಜವ್ವಾದು ಮೊದಲಾದ ಪರಿಮಳ ವಸ್ತುಗಳಿಂದ, ಮುತ್ತುಗಳ ಮಾಲೆಗಳಿಂದ, ಪದ್ಮಗಳ ರಂಗವಲ್ಲಿಗಳಿಂದ ಅಲಂಕರಿಸಿದನು. ಹವಳಗಳ ಮಂಚದ ಮೇಲೆ ಹಂಸತೂಲಿಕಾ ತಲ್ಪಗಳನ್ನು ಹಾಸಿದನು. ಗೋಡೆಗಳಿಗೆ ಸುಂದರವಾದ ಚಿತ್ರವಿಚಿತ್ರ ಪಟಗಳನ್ನು ತಗಲಿಸಿದನು. ಪಾನೀಯಗಳನ್ನೂ ಬಗೆಬಗೆಯ ಭಕ್ಷ್ಯಗಳನ್ನೂ, ಹಣ್ಣುಗಳನ್ನೂ ಹೂವುಗಳನ್ನೂ ಇರಿಸಬೇಕಾದಲ್ಲಿ ಇರಿಸಿದನು. ಶಿವಪಾರ್ವತಿಯರ ಶಯ್ಯಾಗೃಹವು ಅತ್ಯಂತ ಸುಂದರವಾಯಿತು.

ಆಮೇಲೆ ಶಿವನು ನಂದೀಶ್ವರನೇ ಮೊದಲಾದವರೊಂದಿಗೆ, "ನಾವು ಒಳಗೆ ಹೋಗುತ್ತೇವೆ. ನಮ್ಮ ಶಯ್ಯಾ ಮಂದಿರದೊಳಗೆ ಯಾರನ್ನೂ ಬಿಡಬಾರದು. ಭವನದ ಸುತ್ತಲೂ ಕಾವಲು ಕಾಯುತ್ತಿರಬೇಕು" ಎಂದು ಹೇಳಿ ಪಾರ್ವತಿಯ ಕೈಗಳನ್ನು ಹಿಡಿದುಕೊಂಡು ಸೌಧದೊಳಗೆ ಪ್ರವೇಶ ಮಾಡಿದನು. ಶಿವಪಾರ್ವತಿಯರು ದಾಂಪತ್ಯ ಸುಖದಲ್ಲಿ ತೇಲಾಡತೊಡಗಿದರು. ಶಿವಗಣಾದಿಗಳು ಕಟ್ಟೆಚ್ಚರದಿಂದ ಶಿವಮಂದಿರವನ್ನು ಕಾವಲು ಕಾಯುತ್ತಿದ್ದರು.





# ಶಿವಪುರಾಣ

ಶಿವ ಪಾರ್ವತಿಯರ ವಿವಾಹವು ನಡೆದುದನ್ನು ನೋಡಿ ಎಲ್ಲರಿಗೂ ಬಹುದೊಡ್ಡ ಭಾರ ಇಳಿಸಿದಷ್ಟು ಸಂತೋಷವಾಯಿತು. ಎಲ್ಲರೂ ಶುಭ ಫಲದ ನಿರೀಕ್ಷೆಯಲ್ಲಿರುವಾಗ, ದಿನಗಳು ಕ್ರಮಿಸಿದಂತೆ ತಾರಕಾಸುರನ ಭಯವು ಹೆಚ್ಚುತ್ತಾ ಬರತೊಡಗಿತು. ಶಿವ ಪಾರ್ವತಿಯರು ಇನ್ನೂ ನೂತನ ದಂಪತಿಗಳಂತೆಯೇ ಇರುವುದನ್ನು ನೋಡಿ ದೇವತೆಗಳು ಸಹನೆಗೆಡುತ್ತ ಬಂದರು. ಕಡೆಗೆ ಅವರೆಲ್ಲಾ ಒಂದು ದಿನ ಬ್ರಹ್ಮನ ಬಳಿಗೆ ಹೋಗಿ, "ಓ ಪಿತಾಮಹಾ! ನೀನು ಕೊಟ್ಟ ವರಗಳ ಮೂಲಕವಾಗಿ ನಾವೆಲ್ಲಾ ನರಕ ಬಾಧೆಯನ್ನು ಅನುಭವಿಸುತ್ತಿದ್ದೇವೆ. ಇನ್ನೆಷ್ಟು ಕಾಲ ಹೀಗೆ ಅನುಭವಿಸಬೇಕೋ ತಿಳಿಯದಾಗಿದೆ. ಶಿವಪಾರ್ವತಿಯರ ಕಲ್ಯಾಣದಿಂದ ಒಳ್ಳೆಯದಾಗುವುದೆಂದು ನೋಡಿದರೆ ಅದೂ ಕಾಣುವುದಿಲ್ಲ. ತಾರಕಾಸುರನು ಸತ್ತ ಹೊರತು ನಮಗೆ ಬೆಳಗಾಗುವುದಿಲ್ಲ. ನೀವೇ ಏನಾದರೂ ಮಾಡಿ ನಮ್ಮ ಕಷ್ಟ ವಿಮೋಚನೆ ಮಾಡಬೇಕು" ಎಂದರು.

ಬ್ರಹ್ಮನು ಅವರೊಂದಿಗೆ, "ನಾನು ತಾರಕಾಸುರನಿಗೆ ಅಸಾಧಾರಣವಾದ ವರಗಳನ್ನು ಕೊಟ್ಟ ಮಾತು ನಿಜವೇ. ಅವನಿಗೆ ವರಗಳನ್ನು ಕೊಡದಿರಲು ಹೇಗೆ ಸಾಧ್ಯ? ಒಳ್ಳೆಯವರಾದರೂ, ಕೆಟ್ಟವರಾದರೂ ತಪಸ್ಸನ್ನು ಮಾಡಿದ ಮೇಲೆ ವರವನ್ನು ಕೊಟ್ಟು ತೀರಲೇ ಬೇಕಾಗುತ್ತದೆ. ಅವರು ಕೆಟ್ಟ ಉದ್ದೇಶದವರೆಂದುಕೊಂಡು ವರ ಕೊಡದೆ ಸುಮ್ಮನಿದ್ದರೆ, ಅವರ ತಪಸ್ಸಿನಿಂದ ಹುಟ್ಟಿದ ಬೆಂಕಿ ಲೋಕಗಳನ್ನು ದಹಿಸುತ್ತದೆ. ಅಂತಹ ಆಪತ್ತಿನಿಂದ ಕಾಪಾಡಲಿಕ್ಕಾಗಿ ಅವರು ಕೇಳುವ ವರವನ್ನು ಕೊಡಲೇಬೇಕಾಗುತ್ತದೆ. ಆ ವರಗಳ ಸಹಾಯದಿಂದ ಅವರು ಲೋಕಗಳನ್ನು ಪೀಡಿಸುತ್ತಾರೆ. ಆ ಕಾರಣದಿಂದ ಅವರನ್ನು ಕೊಲ್ಲಬೇಕಾದ ಅಗತ್ಯವೂ ಬರುತ್ತದೆ. ಬನ್ನಿ, ನಾವೀಗ ವಿಷ್ಣುವಿನ ಹತ್ತಿರ ಹೋಗಿ ನಮ್ಮ ಕಷ್ಟಗಳನ್ನು ಹೇಳಿಕೊಳ್ಳೋಣ" ಎಂದನು.

ಎಲ್ಲರೂ ಕೂಡಿ ವಿಷ್ಣುವಿನ ಬಳಿಗೆ ಹೋಗಿ ತಾರಕಾಸುರನು ಕೊಡುವ ಕಷ್ಟಗಳನ್ನು ಕುರಿತು

೭. ಕುಮಾರಸಂಭವ

ಹೇಳಿಕೊಂಡರು. ಅದನ್ನೆಲ್ಲ ಕೇಳಿ ಮಹಾವಿಷ್ಣು ಮುಗುಳು ನಗುತ್ತ "ಪಾರ್ವತೀ ಪರಮೇಶ್ವರರು ಮಹಾ ದಂಪತಿಗಳಾದರಷ್ಟೆ ? ಅವರಿಗೆ ಕುಮಾರನು ಹುಟ್ಟಿದ ಕೂಡಲೇ ನಿಮ್ಮೆಲ್ಲರ ಕಷ್ಟಗಳೂ ತೀರಿ ಹೋಗುತ್ತವೆ. ಎಲ್ಲದಕ್ಕೂ ಕಾಲವು ಕೂಡಿ ಬರ ಬೇಕಲ್ಲವೆ ? " ಎಂದನು.

"ಶಿವ ಪಾರ್ವತಿಯರ ದಾಂಪತ್ಯವು ಪ್ರಾರಂಭ ವಾಗಿ ಬಹಳ ಕಾಲವಾಯಿತು. ಇನ್ನೂ ಅವರಿಗೆ ಮಗನು ಹುಟ್ಟಲಿಲ್ಲ. ನಮ್ಮ ಚಿಂತೆಯೇ ಶಿವನಿಗೆ ಇರುವಂತೆ ಕಾಣುವುದಿಲ್ಲ. ನೀನು ಬಂದು ಶಿವನನ್ನು ನೋಡಿ ನಮ್ಮ ಗೋಳನ್ನು ಅವನಿಗೆ ಸ್ವಲ್ಪ ಮನ ವರಿಕೆಯಾಗುವಂತೆ ಹೇಳಬೇಕು" ಎಂದು ದೇವತೆ ಗಳು ವಿಷ್ಣುವನ್ನು ಪ್ರಾರ್ಥಿಸಿಕೊಂಡರು.

ವಿಷ್ಣು ಅದಕ್ಕೆ ಒಪ್ಪಿ, ಅವರನ್ನೆಲ್ಲಾ ಕರೆದು ಕೊಂಡು ಕೈಲಾಸಕ್ಕೆ ಹೊರಟನು. ಕೈಲಾಸದಲ್ಲಿ ಶಿವ ಭವನದ ಸುತ್ತಲೂ ನಂದೀಶ್ವರನು ತಿರುಗಾಡಿ ಕೊಂಡಿದ್ದನು. ಅವನೊಂದಿಗೆ ಬೇರೆ ಗಣಗಳೂ ಕಾವಲು ಕಾಯುತ್ತಿದ್ದವು. ವಿಷ್ಣು ನಂದೀಶ್ವರನನ್ನು ನೋಡಿ, "ನಾವು ಶಿವನನ್ನು ನೋಡಲು ಬಂದಿದ್ದೇವೆ. ನಮ್ಮನ್ನು ಒಳಕ್ಕೆ ಬಿಡು" ಎಂದನು.

"ನನ್ನನ್ನು ಕ್ಷಮಿಸಬೇಕು. ಶಿವ ಪಾರ್ವತಿಯರು ಏಕಾಂತದಲ್ಲಿದ್ದಾರೆ. ಯಾರನ್ನೂ ಒಳಗೆ ಬಿಡಬಾರ ದೆಂದು ಶಿವನ ಆಜ್ಞೆ. ಅದನ್ನು ಪಾಲಿಸಬೇಕಾದುದು ನಮ್ಮ ವಿಧಿ" ಎಂದನು ನಂದೀಶ್ವರ.

ವಿಷ್ಣು ದೇವತೆಗಳನ್ನು ನೋಡಿದನು. ದೇವತೆಗಳು ಏನೂ ತೋರದೆ ಮುಖ ಬಾಡಿಸಿಕೊಂಡರು. ಅವರು ಏತಕ್ಕಾಗಿ ಬಂದರೋ ಆ ಕೆಲಸಕ್ಕೆ ವಿಘ್ನ ಬಂದಿತು. ಆದುದರಿಂದ ವಿಷ್ಣು ದೇವತೆ ಗಳನ್ನು ನೋಡಿ, "ನೀವುಗಳು ಪಾರ್ಥಿವ ಲಿಂಗವನ್ನು ತಯಾರು ಮಾಡಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ಪೂಜಿಸಿರಿ. ಆದರಿಂದ ಶಿವನು ಪ್ರಸನ್ನನಾಗಿ ದರ್ಶನ ಕೊಡುತ್ತಾನೆ" ಎಂದು ಹೇಳಿದನು.

ಅದರಂತೆ ದೇವತೆಗಳು ಮಣ್ಣಿನಿಂದ ಪಾರ್ಥಿವ ಲಿಂಗವನ್ನು ತಯಾರು ಮಾಡಿ, ಪಂಚಾಕ್ಷರೀ ಮಂತ್ರ



ಅರ್ಚಿಸುತ್ತ, ಷೋಡಶೋಪಚಾರಗಳಿಂದ ಪೂಜಿಸಿ, "ಹರ ಹರ ಮಹದೇವ ಶಂಭೋ !" ಎಂದು ಗಟ್ಟಿಯಾಗಿ ಕೂಗಿದರು. ಅವರ ಕೂಗು ಎಲ್ಲಾ ದಿಕ್ಕುಗಳಲ್ಲಿಯೂ ಸೆಲೆಗೊಟ್ಟಿತು.

ಸ್ತೋತ್ರಪ್ರಿಯನಾದ ಶಿವನು ಅದನ್ನು ಕೇಳಿ, ಸೀದಾ ಬಾಗಿಲ ಬಳಿಗೆ ಬಂದು, "ದೇವತೆಗಳೇ, ನನ್ನನ್ನೇಕೆ ಹೀಗೆ ಕೂಗಿ ಕರೆದಿರಿ?" ಎಂದು ಕೇಳಿದನು.

ಬ್ರಹ್ಮನೇ ಮೊದಲಾದವರು ಅವನಿಗೆ ಕೈಮುಗಿದು, "ಅಹೋ ಪರಮೇಶ್ವರಾ ! ತಾರಕಾಸುರನ ದುಶ್ಚರ್ಯೆಗಳು ದಿನದಿನಕ್ಕೂ ಹೆಚ್ಚಾಗುತ್ತಿವೆ. ಯಜ್ಞ ಯಾಗಗಳು ನಡೆಯದಂತೆ ಋಷಿಗಳನ್ನು ನಾನಾ ವಿಧವಾಗಿ ಹಿಂಸಿಸುತ್ತಾನೆ. ತಾರಕಾಸುರನನ್ನು ಕೊಲ್ಲಲು ನಿನ್ನ ಅಂಶದಿಂದ ನಮ್ಮನ್ನು ರಕ್ಷಿಸುವಂತಹ ಒಬ್ಬ ಮಗನನ್ನು ಕರುಣಿಸು ದೇವಾ !" ಎಂದು ಬೇಡಿಕೊಂಡರು.

ಈ ಮಾತು ಕೇಳಿದ ಕೂಡಲೇ ಶಿವನು ಅಭಯ ಹಸ್ತವನ್ನೆತ್ತಿ "ಚಿಂತಿಸಬೇಡಿರಿ. ಬೇಗದಲ್ಲೇ ನಿಮ್ಮ ಕಷ್ಟ ತೀರುತ್ತದೆ" ಎಂದು ಎಲ್ಲರನ್ನೂ ಕಳುಹಿಸಿದನು, ಆಮೇಲೆ ಶಿವನು ತನ್ನ ಅಂಶದಿಂದ, ಮಾರ್ಗಶಿರ, ಷಷ್ಠಿ, ಧನಿಷ್ಠಾ ನಕ್ಷತ್ರ, ವೃಶ್ಚಿಕ ಲಗ್ನದಲ್ಲಿ ಒಬ್ಬ ಮಗನನ್ನು ಸೃಷ್ಟಿಸಿದನು. ಆ ಬಾಲನಿಗೆ ಆರು ಮುಖಗಳು, ಹನ್ನೆರಡು ಕೈಗಳು ಇದ್ದುವು. ಶರೀರವು ವಜ್ರ ಸದೃಶವಾಗಿತ್ತು.

ಆ ಹುಡುಗನನ್ನು ವಾಯುದೇವನು ಹೊತ್ತುಕೊಂಡು ಹೋಗಿ ಗಂಗಾತೀರದ ಹುಲ್ಲುಗಳ ನಡುವೆ ಇರಿಸಿದನು. ಇದನ್ನು ತಿಳಿದು ಆರು ಮಂದಿ ಮುನಿಪತ್ನಿಯರು ಗಂಗಾತೀರಕ್ಕೇ ಬಂದು ಆರು ಮುಖಗಳ ಮಗುವನ್ನು ನೋಡಿದರು. ಆಗಲೇ ಅವರೆಲ್ಲರಲ್ಲಿಯೂ ಸ್ತನ್ಯವು ತುಂಬಿಕೊಂಡಿತು. ಶಿವ ಬಾಲನು ಆರು ಮುಖಗಳಿಂದ ಆರು ಮಂದಿ ತಾಯಿಯರ ಹಾಲನ್ನು ಕುಡಿದನು. ಈ ಅದ್ಭುತ ಬಾಲನನ್ನು ನೋಡಿ ದೇವತೆಗಳೆಲ್ಲಾ ಸಂತೋಷಪಟ್ಟರು.

ಸ್ವತಃ ಬ್ರಹದೇವನೇ ಬಂದು ಆರು ಮುಖಗಳ ಮಗುವನ್ನು ನೋಡಿದನು. ಆ ಮಗುವಿಗೆ ಜಾತ





ಕರ್ಮ, ನಾಮಕರಣಗಳನ್ನು ಬ್ರಹ್ಮನೇ ಮಾಡಿದನು. ಆ ಹುಡುಗನೇ ಕುಮಾರಸ್ವಾಮಿ. ಅವನಿಗೆ ಷಣ್ಮುಖನೆಂದೂ, ಸ್ಕಂಧನೆಂದೂ, ಗುಹನೆಂದೂ ಅನೇಕ ಹೆಸರುಗಳು ಬಂದವು. ಋಷಿಗಳೂ ದೇವತೆಗಳೂ ಆ ಬಾಲನನ್ನು ನೋಡಿ ಹರಸಿದರು.

ಮುನಿ ಪತ್ನಿಯರು ಕುಮಾರಸ್ವಾಮಿಯೊಂದಿಗೆ "ಅಪ್ಪಾ, ನಾವು ನಿನಗೆ ಹಾಲೂಡಿಸಿದೆವೆಂಬುದರಿಂದಲೋ ಏನೋ, ನಮ್ಮನ್ನು ನಮ್ಮ ಪತಿಗಳು ಬಿಟ್ಟುಬಿಟ್ಟಿದ್ದಾರೆ. ನಮಗೆ ಇನ್ನು ಯಾರು ದಿಕ್ಕು? ನೀನೇ ಹೇಳಪ್ಪಾ" ಎಂದರು.

"ನಾನು ನಿಮ್ಮ ಮಗನಾಗಿದ್ದೇನೆ. ನೀವುಗಳು ನನ್ನ ತಾಯಿಗಳಾದಿರಿ. ಮತ್ತೇಕೆ ಚಿಂತೆ? ಆದುದರಿಂದ ನೀವು ನನ್ನೊಂದಿಗೇ ಇದ್ದುಬಿಡಿರಿ" ಎಂದನು ಕುಮಾರಸ್ವಾಮಿ.

ಆಮೇಲೆ ಕುಮಾರಸ್ವಾಮಿ ದಿನದಿನ ಪ್ರವರ್ಧಮಾನನಾಗುತ್ತ ಬೆಟ್ಟಗಳ ಮೇಲೆ ತಿರುಗಿ ಆಡುತ್ತ, ಸಿಂಹಗಳನ್ನೂ, ಹುಲಿಗಳನ್ನೂ ಹಿಡಿದು ತನ್ನಿಷ್ಟ ಪ್ರಕಾರ ಆಡಿಸುತ್ತ, ಸವಾರಿಮಾಡುತ್ತ ಬರುತ್ತಿದ್ದನು. ಅವನಿಗೆ ಶಿವನ ಬಿಲ್ಲು ದೊರಕಿತು. ಆ ಬಿಲ್ಲಿನ ಪ್ರಭಾವವೇನೆಂದು ನೋಡುವ ಕುತೂಹಲದಿಂದ ಅದಕ್ಕೆ ಬಾಣಗಳನ್ನು ಹೂಡಿ ಪ್ರಯೋಗಿಸಿ ಕ್ರೌಂಚ ಪರ್ವತದ ಶಿಖರವನ್ನು ಖಂಡಿಸಿದನು.

ಅದನ್ನು ನೋಡಿ ಆ ಪರ್ವತದ ಮೇಲಿದ್ದ ರಾಕ್ಷಸರು ಕುಮಾರಸ್ವಾಮಿಯ ಮೇಲೆ ಕೆರಳಿ ಯುದ್ಧಕ್ಕೆ ಬಂದರು. ಬಾಲ ಕುಮಾರಸ್ವಾಮಿ ಸ್ವಲ್ಪವೂ ಹೆದರದೆ ಅವರೆಲ್ಲರನ್ನೂ ಲೀಲಾಜಾಲವಾಗಿ ಕೊಂದುಬಿಟ್ಟನು.

ಇಷ್ಟಾಗುವಾಗ ಶಿವಪಾರ್ವತಿಯರಿಗೆ ಇಪ್ಪತ್ತೊಂದು ಮಕ್ಕಳು ಹುಟ್ಟಿದರು. ಅವರೆಲ್ಲರೂ ಬೇರೆ ಬೇರೆ ಗಣಗಳಿಗೆ ಮೂಲ ಪುರುಷರಾಗಿ ಗಣಪತಿಗಳು ಎನಿಸಿಕೊಂಡರು, ಹೀಗೆ ಕೈಲಾಸದಲ್ಲಿ ಶಿವ ಸಂಸಾರವು ಬೆಳೆಯಿತು.

ಶಿವನು ನಂದೀಶ್ವರನ ಮೂಲಕವಾಗಿ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳನ್ನೂ, ಗಂಗಾ ತೀರದಲ್ಲಿರುವ ಕುಮಾರಸ್ವಾಮಿಯನ್ನೂ, ಅವನ ತಾಯಂದಿರಾದ ಆರುಮಂದಿ ಕೃತ್ತಿಕೆಯರನ್ನೂ ಕೈಲಾಸಕ್ಕೆ ಕರೆಯಿಸಿದನು. ನಂದೀಶ್ವರನು ಅವರೆಲ್ಲರನ್ನೂ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಕರೆದುಕೊಂಡು ಬಂದನು.

ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿಗೆ ಇದಿರಾಗಿ ಹೋಗಿ ಅವನನ್ನು ಗಾಢಾಲಿಂಗನಮಾಡಿ, ಕರೆದುಕೊಂಡು ಬಂದು ಸಭೆಯಲ್ಲಿ ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು. ಒಂದು ಬದಿಯಲ್ಲಿ ದೇವತೆಗಳೂ, ಮತ್ತೊಂದು ಬದಿಯಲ್ಲಿ ಶಿವಗಣಗಳೂ ಸೇರಿದ ಮಹಾಸಭೆಯದು.

ಆಗ ಬ್ರಹ್ಮನು ಕುಮಾರಸ್ವಾಮಿಯ ಪಕ್ಕದಲ್ಲಿ ನಿಂತುಕೊಂಡು, "ಪಾರ್ವತೀ ಪರಮೇಶ್ವರರೇ!



ಕುಮಾರಸ್ವಾಮಿ ಎಂಬ ಹೆಸರಿನ ನಿಮ್ಮ ಈ ಕುಮಾರನು ಈ ದಿನ ಕೈಲಾಸಕ್ಕೆ ಬಂದಿದ್ದಾನೆ. ನಾಳೆಯ ಶುಭಮುಹೂರ್ತದಲ್ಲಿ ಇವನನ್ನು ದೇವ ಸೇನಾಪತಿಯಾಗಿ ಅಧಿಕಾರಾಭಿಷೇಕ ಮಾಡಬೇಕು. ಇದಕ್ಕೆ ಎಲ್ಲರೂ ಒಮ್ಮನಸ್ಸಿನಿಂದ ಒಪ್ಪಬೇಕು. ಲೋಕ ಕಲ್ಯಾಣಕ್ಕೆ ಹೀಗೆ ಮಾಡುವುದು ಒಳ್ಳೆಯದು" ಎಂದನು.

ಬ್ರಹ್ಮನ ಮಾತನ್ನು ಕೇಳಿ ಸಭೆಯಲ್ಲಿರುವವರೆಲ್ಲಾ ಸಂತೋಷಪಟ್ಟರು. ಪಾರ್ವತೀ ಪರಮೇಶ್ವರರು ದೇವತೆಗಳೆಲ್ಲರ ಸಮುಕ್ಷಮದಲ್ಲಿ ಕುಮಾರಸ್ವಾಮಿಗೆ ಉಪನಯನವನ್ನು ಮಾಡಿದರು. ಅನಂತರ ಬ್ರಹ್ಮನ ಪೌರೋಹಿತ್ಯದಲ್ಲಿಯೇ ಕುಮಾರಸ್ವಾಮಿಗೆ ದೇವ ಸೇನಾಪತಿಯಾಗಿ ಅಭಿಷೇಕವೂ ನಡೆಯಿತು. ಬ್ರಹ್ಮಾಂಡವೆಲ್ಲಾ ಜಯ ಘೋಷದಿಂದ ತುಂಬಿತು.

ಆಗ ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿಯೊಂದಿಗೆ, "ಅಪ್ಪಾ, ನೀನೀಗ ದೇವ ಸೇನಾಪತಿ. ನೀನು ದೇವೇಂದ್ರನ ಹಿತಕಾರಿಯಾಗಿದ್ದು ಮೂರು ಲೋಕಗಳನ್ನೂ ಆಪತ್ತುಗಳಿಂದ ರಕ್ಷಿಸುತ್ತಿರಬೇಕು. ದುಷ್ಟರನ್ನೂ ಪಾಪಿಗಳನ್ನೂ, ಭೂಭಾರಕ್ಕೆ ಕಾರಣರಾಗುವವರನ್ನೂ ಸಂಹರಿಸಬೇಕು. ಹೀಗೆ ನೀನು ಬಹು ದೊಡ್ಡವನೆಂದು ಲೋಕದಲ್ಲಿ ಗೌರವ ಹೊಂದಿಕೊಂಡಿರು. ಚಿರಂಜೀವಿಯಾಗಿರು" ಎಂದು ಹೇಳಿ ಆಶೀರ್ವಾದ ಮಾಡಿದನು.

ಅನಂತರ ಸ್ವರ್ಗಲೋಕದಲ್ಲಿ ವಿಶ್ವಕರ್ಮನಿಂದ ಕುಮಾರಸ್ವಾಮಿಗೆ ತಕ್ಕುದಾದ ಒಂದು ಭವನವನ್ನು ಕಟ್ಟಿಸಿದರು.

ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿಯೊಂದಿಗೆ, "ಅಪ್ಪಾ, ನಿನಗಾಗಿ ಭವನವು ಸಿದ್ಧವಾಯಿತು. ನೀನು ಆ ಭವನದಲ್ಲಿ ನಿವಾಸಮಾಡಿಕೊಂಡಿರು. ನಿನಗೆ ಬೇಕಾದುದನ್ನೆಲ್ಲಾ ಅಲ್ಲಿಯೇ ಸ್ವತಂತ್ರವಾಗಿ ಮಾಡಿಸಿಕೊಂಡಿರು" ಎಂದರು.

ಪಾರ್ವತೀದೇವಿ ಕುಮಾರಸ್ವಾಮಿಗೆ ದೇವಿ ಗಣಗಳನ್ನು ಕೂಡಾ ಒಪ್ಪಿಸಿದಳು. ಆಗ ದೇವತೆಗಳು ಕುಮಾರಸ್ವಾಮಿಗೆ ಅನೇಕ ವರಗಳನ್ನೂ, ಅಸ್ತ್ರ ಶಸ್ತ್ರ ಆಯುಧಗಳನ್ನೂ ಕೊಟ್ಟು, ಕುಮಾರಸ್ವಾಮಿಯ ಕೈಯಲ್ಲಿ ತಾರಕಾಸುರನ ಸಂಹಾರವಾಗಲೆಂದು ಹರಸಿದರು.

ಕುಮಾರಸ್ವಾಮಿ ಪಾರ್ವತೀ ಪರಮೇಶ್ವರರ ಉಪದೇಶಗಳನ್ನು ಶಿರದೊಳಾಂತು, ಎಲ್ಲಾ ದೇವತೆಗಳಿಗೂ ವಂದಿಸಿ ತನ್ನ ಗಣಗಳೊಂದಿಗೆ, "ಈಗ ನೀವೆಲ್ಲರೂ ತಾರಕಾಸುರನ ಪಟ್ಟಣವನ್ನು ಮುತ್ತಿಗೆ ಹಾಕಲು ಬೇಕಾದ ಎಲ್ಲಾ ಸನ್ನಾಹಗಳನ್ನೂ ಮಾಡಿರಿ. ಮೊದಲು ನಾವು ಮಾಡಬೇಕಾದ ಕರ್ತವ್ಯ ಕರ್ಮ ಅದೇ" ಎಂದನು. ಕೂಡಲೇ ರಣಭೇರಿ ಮೊಳಗ ತೊಡಗಿತು, ಕುಮಾರಸ್ವಾಮಿ ತನಗಾಗಿ ನಿರ್ಮಾಣವಾದ ಭವನದೊಳಗೆ ಪ್ರವೇಶ ಮಾಡಿದನು.



ಇಲ್ಲಿ ಹೀಗಿರುವಾಗ ಅಲ್ಲಿ ಶೋಣಿತಪುರದಲ್ಲಿ ತಾರಕನಿಗೆ ಕುಮಾರಸ್ವಾಮಿಯ ವಾರ್ತೆಗಳೆಲ್ಲ ಬರುತ್ತಲೇ ಇದ್ದುವು. ತನ್ನನ್ನು ಕೊಲ್ಲಿಸಲಿಕ್ಕಾಗಿಯೇ ದೇವತೆಗಳು ಈ ಕುಮಾರಸ್ವಾಮಿಯನ್ನು ತಯಾರಿ ಸಿದ್ಧಾರೆಂದೂ ಆವನಿಗೆ ತಿಳಿಯಿತು. ಆ ದೇವ ಸೇನಾ ಪತಿಯನ್ನು ಸಂಧಿಸಲು ಆವನೂ ಸಿದ್ಧನಾಗ ತೊಡಗಿದನು.

ತಾರಕನು ತನ್ನ ಮಂತ್ರಿಗಳನ್ನೂ, ಸೇನಾನಾಯಕ ರನ್ನೂ ಕರೆಯಿಸಿ, "ನಮ್ಮ ನಗರದ ಮೇಲೆ ದೇವತೆ ಗಳು ದಾಳಿ ಮಾಡಲಿರುವರೆಂದು ಚಾರರಿಂದ ತಿಳಿದು ಬಂದಿದೆ. ಅದನ್ನು ಇದಿರಿಸಲು ನೀವೆಲ್ಲರೂ ಸಿದ್ಧ ರಾಗಿರಬೇಕು" ಎಂದು ಆಜ್ಞೆ ಮಾಡಿದನು.

ತರುವಾಯ ಶಿವಭಕ್ತನಾದ ತಾರಕನು ಪಾರ್ಥಿವ ಲಿಂಗವನ್ನು ಮಾಡಿ, ಪೂಜೆಗೆ ಬೇಕಾದ ಪಂಚಬಿಲ್ವ ಗಳನ್ನೂ, ತೆಂಗಿನಕಾಯಿ, ಹೂಗಳು, ಪಂಚಾಮೃತ, ಸುಗಂಧ ದ್ರವ್ಯಗಳು ಮೊದಲಾದುವುಗಳಿಂದ ಷೋಡ ಶೋಪಚಾರ ಪೂಜೆ ಮಾಡಿದನು. ಅಭಿಷೇಕ, ಅಲಂಕಾರ, ಧೂಪದೀಪ ನೈವೇದ್ಯಗಳನ್ನು ಮಾಡಿ ದನು. "ಈಶ್ವರಾ! ನಿನ್ನನ್ನು ಪೂಜಿಸಿದ್ದೇನೆ. ಪೂಜೆಗೆ ತಕ್ಕ ಫಲಿತವನ್ನು ನನಗೆ ಪ್ರಾಸಾದಿಸು ಸ್ವಾಮಿ!" ಎಂದು ಸಾಷ್ಟಾಂಗ ಪ್ರಣಾಮ ಮಾಡಿದನು.

ಅತ್ತ ಸ್ವರ್ಗದಲ್ಲಿ ಕುಮಾರಸ್ವಾಮಿ ದೇವತೆಗಳ ಗುರುವಾದ ಬೃಹಸ್ಪತಿ ನಿರ್ಣಯಿಸಿದ ಮುಹೂರ್ತ ದಲ್ಲಿ ರಣಭೇರಿ ಮೊಳಗಿಸಲು ತೊಡಗಿ, ದೇವ, ರುದ್ರ, ವೀರಭದ್ರ ಮತ್ತು ದೇವೀಗಣಗಳೊಂದಿಗೆ ಯುದ್ಧಕ್ಕೆ ಹೊರಟನು.

ಆವನ ಸೇನೆಗಳು ನಿರಾತಂಕವಾಗಿ ಶೋಣಿತಪುರದ ವರೆಗೂ ಬಂದು ನಗರವನ್ನು ಮುತ್ತಿಗೆ ಹಾಕಿ, ಶಿಬಿರದ ಏರ್ಪಾಟು ಮಾಡಿಕೊಂಡುವು. ಶಿಬಿರ ಮಧ್ಯದಲ್ಲಿ ಕುಮಾರಸ್ವಾಮಿ ದೇವೇಂದ್ರಾದಿಗ ಳೊಂದಿಗೆ ಕುಳಿತುಕೊಂಡು, "ತೀರಾ ಯುದ್ಧಕ್ಕೆ ಧುಮುಕುವ ಮೊದಲು ಸಂಧಿಯ ಪ್ರಯತ್ನ ಮಾಡ ಬೇಕೆಂದು ಹಿರಿಯರು ಹೇಳುತ್ತಾರೆ. ಈಗ ನಾವು ತಾರಕನಿಗೆ ಸಂಧಿಯ ರಾಯಭಾರ ಕಳುಹಿಸೋಣ. ಇದಕ್ಕೆ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದನು.

ಇದಕ್ಕೆ ದೇವೇಂದ್ರಾದಿಗಳು ಸಮ್ಮತಿಸಿದರು. ಕುಮಾರಸ್ವಾಮಿ ತನ್ನ ವಕ್ಷಸ್ಥಳವನ್ನು ತಟ್ಟಿದ ಕೂಡಲೇ ಮುಂದೆ ನಿಂತವನನ್ನು ನೋಡಿ, "ವಿಶಾಖಾ, ನೀನು ತಾರಕನ ಬಳಿಗೆ ಹೋಗಿ ನನ್ನ ಮಾತಾಗಿ ಹೀಗೆ ಹೇಳು. ಅದಕ್ಕೆ ಆವನ ಪ್ರತ್ಯುತ್ತರ ವೇನೆಂದು ತಿಳಿದುಕೊಂಡು ಬಾ" ಎಂದು ತಾರಕನಿಗೆ ಹೇಳಬೇಕಾದ ಮಾತನ್ನೂ ಹೇಳಿದನು.

ವಿಶಾಖನು ಅಲ್ಲಿಗೆ ಹೋದಾಗ ತಾರಕನು ಸಭೆ ನಡೆಸಿ, ತನ್ನ ನಗರದ ಮುತ್ತಿಗೆಯನ್ನು ಕುರಿತು ಆಲೋಚನೆ ಮಾಡಿಕೊಂಡಿದ್ದನು. ಆಗ ಬಂದ

ವಿಶಾಖನನ್ನು ನೋಡಿ ತಾರಕನು "ಯಾರು ನೀನು ? ಬಂದ ಕಾರ್ಯವೇನು ?" ಎಂದು ಕೇಳಿದನು.

ವಿಶಾಖನು ಅವನೊಂದಿಗೆ, "ತಾರಕಾ, ನೀನು ಶಿವಭಕ್ತನಾಗಿರುವವನು. ಶಿವಪುತ್ರನಾದ ಕುಮಾರ ಸ್ವಾಮಿಯ ರಾಯಭಾರಿಯಾಗಿ ಬಂದ ವಿಶಾಖನು ನಾನು" ಎಂದನು.

ತಾರಕನು ಸಂತೋಷದಿಂದ ವಿಶಾಖನಿಗೆ ಕುಳಿತು ಕೊಳ್ಳಲು ಹೇಳಿ, ನನ್ನೊಂದಿಗೆ ಕುಮಾರಸ್ವಾಮಿ ಏನು ಹೇಳಿದ್ದಾನೆ ? ನನಗೆ ದೇವತೆಗಳು ವಿರೋಧಿಗಳೇ ಹೊರತು ಕುಮಾರಸ್ವಾಮಿ ವಿರೋಧಿಯಲ್ಲ" ಎಂದನು.

"ತಾರಕಾ, ನೀನು ಬಹಳಕಾಲದಿಂದ ಮೂರು ಲೋಕಗಳನ್ನೂ ಆಳಿರುವೆ. ನಿನ್ನ ಪರಿಪಾಲನೆಯಲ್ಲಿ ಲೋಕಗಳಿಗೆ ಸುಖ ಶಾಂತಿಗಳು ದೊರೆಯಲಿಲ್ಲ. ಇನ್ನು ಮೇಲೆ ನೀನು ಅಧಿಕಾರವನ್ನು ಇಂದ್ರನಿಗೆ ಬಿಟ್ಟುಕೊಟ್ಟು ಭೋಗವತಿಪುರಕ್ಕೆ ಹೊರಟು ಹೋಗ ಬೇಕು. ಇಲ್ಲದಿದ್ದರೆ ಕುಮಾರಸ್ವಾಮಿ ನಿನ್ನವ ರನ್ನೆಲ್ಲಾ ಕೊಂದು ಇಂದ್ರನಿಗೆ ನಿನ್ನ ಅಧಿಕಾರವನ್ನು ಕೊಡಿಸುತ್ತಾನೆ. ಈ ಮಾತುಗಳನ್ನು ನಿನ್ನೊಡನೆ ಹೇಳುವಂತೆ ಕುಮಾರಸ್ವಾಮಿ ನನ್ನನ್ನು ಕಳುಹಿಸಿ ದ್ದಾನೆ" ಎಂದನು ವಿಶಾಖ. ಅದನ್ನು ಕೇಳಿ ತಾರಕನು ಮಹಾ ಕೋಪದಿಂದ ಕಣ್ಣು ತಿರುಗಿಸುತ್ತ, "ನಾನು ಹೆದರಿ ಯಾವುದನ್ನೂ ಬಿಟ್ಟುಕೊಡಲಾರೆನು. ನಾಳೆ ಬೆಳಗ್ಗೆ ಯುದ್ಧಕ್ಕೆ ಬರುತ್ತೇನೆ. ಸಿದ್ಧವಾಗಿರಲು ಹೇಳು" ಎಂದು ಉತ್ತರಕೊಟ್ಟನು. ವಿಶಾಖನು ಅಲ್ಲಿಂದ ಹಿಂದಿರುಗಿದನು.

ಮರುದಿನ ಸೂರ್ಯೋದಯವಾಗುವಾಗ ಎರಡು ಪಕ್ಷಗಳ ಸೇನೆಗಳೂ ಯುದ್ಧಕ್ಕೆ ಸಿದ್ಧವಾದುವು. ಯುದ್ಧವೂ ಪ್ರಾರಂಭವಾಯಿತು. ಉಭಯ ಪಕ್ಷಗಳ ವರೂ ಪ್ರಾಣದ ಆಸೆಯಿಲ್ಲದೆ ಹೋರಾಡಿದರು. ತಾರಕನ ಪಕ್ಷದಲ್ಲಿ ಬಾಣಾಸುರ, ಜಂಬಾಸುರ, ಪ್ರಲಂಬಾಸುರ, ಅತಿಬಲ, ಶಂಭಾಸುರ, ಕುಂಭಾಸುರ ಮೊದಲಾದ ವೀರಾಧಿವೀರರಿದ್ದರು, ಕುಮಾರ ಸ್ವಾಮಿಯ ಪಕ್ಷದಲ್ಲಿ ವೀರಭದ್ರ, ಅಗ್ನಿಹೋತ್ರ, ಧರ್ಮ, ಸೂರ್ಯಚಂದ್ರರು ಮೊದಲಾದವರಿದ್ದರು.

ಯುದ್ಧವು ಅನೇಕ ದಿನಗಳವರೆಗೆ ನಡೆಯಿತು. ತಾರಕನು ಸೋಲುವ ಸೂಚನೆ ಸ್ವಲ್ಪವೂ ಕಾಣಲಿಲ್ಲ. ದೇವತೆಗಳಿಗೆ ಆಯಾಸವಾಗಲು ತೊಡಗಿತು. ಅವರ ಧೈರ್ಯವು ಪೂರ್ತಿ ಅಳಿಯುವ ಸಮಯದಲ್ಲಿ ಕುಮಾರಸ್ವಾಮಿ ಪಾಶುಪತಾಸ್ತ್ರವನ್ನು ಪ್ರಯೋಗಿ ಸಿದನು. ಅದು ತಾರಕನ ಸೈನ್ಯದ ಮೇಲೆ ಕೆಲವು ಸಾವಿರ ಸಿಡಿಲುಗಳ ಹಾಗೆ ಹೋಗಿ ಬಿತ್ತು. ರಾಕ್ಷಸ ಸೇನೆಗಳು ಚೆಲ್ಲಾಪಿಲ್ಲಿಯಾದುವು, ಉಳಿದವರೆಲ್ಲಾ ಸುಟ್ಟು ಬೂದಿಯಾಗಿ ಹೋದರು.






ತಾರಕಾಸುರನು ತನಗೆ ಬಂದ ಮಹಾ ಕೋಪಾವೇಶವನ್ನು ಹತ್ತೊತ್ತಿಕೊಂಡು, ತನ್ನ ಧ್ಯಾನ ಭವನಕ್ಕೆ ಹೋಗಿ ಶಿವಪಂಚಾಕ್ಷರಿಯನ್ನು ಜಪಿಸುತ್ತ ಧ್ಯಾನದಲ್ಲಿ ಕುಳಿತನು. ಹಾಗಿರುವಾಗ ಒಂದು ಅಶರೀರವಾಣಿ ಹೀಗೆ ಮೊಳಗಿತು :

"ತಾರಕಾ ! ಚಿಂತಿಸಬೇಡ. ನಿನಗೆ ಮೋಕ್ಷವನ್ನು ಕೊಡುತ್ತೇನೆ !" ಇದನ್ನು ಕೇಳಿ ಸಮಾಧಾನಗೊಂಡ ತಾರಕನು ಪೂಜೆಯನ್ನು ಮುಗಿಸಿ, ಶಿವಲಿಂಗವನ್ನು ಕಂಠದಲ್ಲಿ ಧರಿಸಿ, ಮತ್ತೆ ಯುದ್ಧಕ್ಕೆ ಬಂದನು.

ಕುಮಾರಸ್ವಾಮಿಗೂ ತಾರಕಾಸುರನಿಗೂ ಖಾಡಾ ಖಾಡೀ ಯುದ್ಧವು ಪ್ರಾರಂಭವಾಯಿತು. ಕುಮಾರ ಸ್ವಾಮಿ ಎಷ್ಟು ಅಸ್ತ್ರಗಳನ್ನು ಪ್ರಯೋಗಿಸಿದರೂ ತಾರಕನು ಸ್ವಲ್ಪವೂ ಚಲಿಸಲಿಲ್ಲ. ಅವನಿಗೆ ಇರುವೆ ಕಚ್ಚಿದಂತೆಯೂ ಅನಿಸಲಿಲ್ಲ. ಅವನ ಕೊರಳಿನಲ್ಲಿ ಈಶ್ವರನ ಲಿಂಗವಿರುವಾಗ ಅವನನ್ನು ಯಾವ ಅಸ್ತ್ರ ಶಸ್ತ್ರಗಳೂ ಏನೂ ಮಾಡಲಾರವೆಂದು ನಾರದನು ಬಂದು ಕುಮಾರಸ್ವಾಮಿಯೊಂದಿಗೆ ಹೇಳಿದನು.

ಈ ಮಾತನ್ನು ನೆನಪಿಟ್ಟುಕೊಂಡು ಕುಮಾರ ಸ್ವಾಮಿ ತಾರಕನ ಎದೆಯಲ್ಲಿರುವ ಶಿವಲಿಂಗವನ್ನು ಗುರಿಯಿಟ್ಟು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆದರಿಂದ ಆ ಲಿಂಗವು ಐದು ತುಂಡುಗಳಾಗಿ ಕೆಳಗೆ ಬಿತ್ತು. ಸೂರ್ಯನೂ ವಿಶ್ವಕರ್ಮನೂ ಕೂಡಲೇ ಕೆಳಗೆಬಿದ್ದ ಲಿಂಗದ ತುಂಡುಗಳನ್ನು ಹೆಕ್ಕಿ ತೆಗೆದುಕೊಂಡು ಹೋಗಿ ಐದು ಕಡೆಗಳಲ್ಲಿ ಪ್ರತಿಷ್ಠೆ ಮಾಡಿದರು. ಆ ಸ್ಥಳಗಳು ಪಂಚ ಭೀಮಲಿಂಗೇಶ್ವರಗಳೆಂದು ಪ್ರಸಿದ್ಧವಾದುವು.

ತಾರಕನ ಕೊರಳಿಗೆ ಕಟ್ಟಿಕೊಂಡಿದ್ದ ಶಿವಲಿಂಗವು ಯಾವಾಗ ಕೆಳಗೆಬಿದ್ದು ಒಡೆದುಹೋಯಿತೋ ಆಗಲೇ ಕುಮಾರಸ್ವಾಮಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ತಾರಕನನ್ನು ಸಂಹರಿಸಿಬಿಟ್ಟನು. ದೇವೀಗಣಗಳು ತಾರಕನ ಸೇನೆಗಳನ್ನು ಕೊಲ್ಲುತ್ತ, ಮಾಂಸಗಳನ್ನು ತಿಂದು ರಕ್ತವನ್ನು ಕುಡಿಯುತ್ತ ಬೀಭತ್ಸ ರೂಪಗಳಿಂದ ನೃತ್ಯಗಳನ್ನು ಮಾಡುತ್ತಿರಲು, ದೇವತೆಗಳು ಪುಷ್ಪವೃಷ್ಟಿ ಸುರಿಸಿದರು.

೮. ವಳ್ಳೀ ಕಲ್ಯಾಣ



ಯಾರಿಂದಲೂ ಕೊಲ್ಲಲಾಗದ ತಾರಕಾಸುರ ನನ್ನೂ, ಅವನೊಂದಿಗೆ ಸೇರಿದ ಅನೇಕ ಮಂದಿ ಇತರ ರಾಕ್ಷಸರನ್ನೂ ಸಂಹಾರ ಮಾಡಿದ ಮೇಲೆ ಕುಮಾರ ಸ್ವಾಮಿ ಸ್ವಲ್ಪಕಾಲ ಸ್ವರ್ಗದಲ್ಲಿಯೇ ಇದ್ದು, ಆಮೇಲೆ ಪಾರ್ವತೀ ಪರಮೇಶ್ವರರನ್ನು ಸೇವಿಸ ಬೇಕೆಂಬ ಆಲೋಚನೆಯಿಂದ ಕೈಲಾಸಕ್ಕೆ ಬಂದು ಅಲ್ಲಿಯೇ ಇದ್ದನು.

ಹಾಗಿರುವಾಗ ಒಂದು ದಿನ ಕುಮಾರಸ್ವಾಮಿ ತನ್ನ ಸ್ನೇಹಿತರೊಂದಿಗೆ ಕೂಡಿಕೊಂಡು ವನವಿಹಾರ ಮಾಡಲು ಹೊರಟನು. ಆಗ ನಾರದ ಮಹಾಮುನಿ ಅವನ ಬಳಿಗೆ ಬಂದನು. ಕುಮಾರಸ್ವಾಮಿ ನಾರದನಿಗೆ ವಂದಿಸಿ, ಅತಿಥಿ ಸತ್ಕಾರಗಳನ್ನು ಮಾಡಿ, "ಮುನೀಶ್ವರಾ! ಲೋಕಗಳಲ್ಲಿರುವ ವಿಶೇಷ ಸಮಾಚಾರಗಳೇನು ?" ಎಂದು ಕೇಳಿದನು.

"ದೇವಸೇನಾಪತೀ! ನಿನ್ನ ದಯದಿಂದ ಎಲ್ಲಾ ಲೋಕಗಳವರೂ ಸುಖವಾಗಿದ್ದಾರೆ. ನೀನು ರಾಕ್ಷಸರನ್ನೆಲ್ಲ ಸಂಹಾರ ಮಾಡಿದುದರಿಂದ ಈಗ ಯಜ್ಞ ಯಾಗಾದಿ ಸಾತ್ವಿಕ ಕರ್ಮಗಳೆಲ್ಲ ಶುಭಸಾಂಗವಾಗಿ ಸಾಗುತ್ತಾ ಇವೆ. ನಾನೀಗ ನಿನಗೆ ಒಂದು ವಿಷಯ ವನ್ನು ಹೇಳಬೇಕೆಂತಲೇ ಬಂದಿದ್ದೇನೆ. ಇಲ್ಲಿಗೆ ಸಮೀಪದಲ್ಲಿ ಭಿಲ್ಲಪುರವೆಂಬ ಊರೊಂದಿದೆ. ಅಲ್ಲಿ ಪುಳಿಂದನೆಂಬ ಭಿಲ್ಲರ ರಾಜನಿದ್ದಾನೆ. ಅವನು ದೊಡ್ಡ ಈಶ್ವರ ಭಕ್ತ. ಅವನ ಹೆಂಡತಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ಹೀಗಿರುವಾಗ ಆ ಭಿಲ್ಲರಾಜನಿಗೆ ವನದಲ್ಲಿ ಒಂದು ಹೆಣ್ಣು ಮಗು ದೊರಕಿತು. ಅವನು ಆ ಮಗುವನ್ನು ತಂದು ತನ್ನ ಹೆಂಡತಿಯ ಕೈಗೆ ಕೊಟ್ಟನು. ಆ ದಂಪತಿಗಳು ಆ ಮಗುವಿಗೆ ವಳ್ಳಿ ಎಂದು ಹೆಸರಿಟ್ಟು ಅತ್ಯಂತ ಅಕ್ಕರೆಯಿಂದ ಬೆಳೆಸಿದರು. ವಳ್ಳಿಯ ಅಂದಚೆಂದ ಗಳನ್ನು ವರ್ಣಿಸಲು ನನ್ನಿಂದ ಸಾಧ್ಯವಾಗದು. ಬಂಗಾರದ ಬೊಂಬೆ! ನೋಡಿದ ಕೂಡಲೇ ವನಲಕ್ಷ್ಮಿಯ ಹಾಗೆ ಕಾಣುತ್ತಾಳೆ. ಅವಳೇ ನಿನಗೆ ಪತ್ನಿಯಾಗುವಳೆಂದು ಬ್ರಹ್ಮನು ಮಾತಿನ ಸಂದರ್ಭ ದಲ್ಲಿ ನನ್ನೊಂದಿಗೆ ಹೇಳಿದನು. ಈಗ ಅವಳು ಯುಕ್ತವಯಸ್ಸಿಗೆ ಬಂದಿದ್ದಾಳೆ. ನೀನು ಅವಳನ್ನು ವರಿಸಿಕೊಂಡು ಸುಖಪಡುತ್ತ ಪ್ರಸಿದ್ಧನಾಗು" ಎಂದನು ನಾರದ.

ಅನಂತರ ನಾರದನು ಕುಮಾರಸ್ವಾಮಿಯಿಂದ ಅಪ್ಪಣೆ ಪಡೆದು ಭಿಲ್ಲ ರಾಜನಾದ ಪುಳಿಂದನ ಬಳಿಗೆ ಹೋದನು. ಪುಳಿಂದನು ಅವನನ್ನು ಗೌರವಿಸಿ ಕುಳ್ಳಿರಿಸಿದ ಮೇಲೆ, "ಮುನೀಂದ್ರರೇ, ಸರಿಯಾದ ಸಮಯಕ್ಕೆ ಬಂದಿರಿ. ನನ್ನ ಮಗಳು ವಳ್ಳಿಗೆ ತಕ್ಕ ಗುಣ ರೂಪಗಳಿರುವ ಗಂಡನು ಎಲ್ಲಿರುವನೆಂದು ಅಪ್ಪಣೆ ಕೊಡಿಸಬೇಕು" ಎಂದು ಕೇಳಿಕೊಂಡನು.

"ಹೌದು. ನಿನ್ನ ಮಗಳು ವಳ್ಳಿಯ ಸಂಗತಿ ಪೂರಾ ನನಗೆ ಗೊತ್ತಿದೆ. ಇವಳಿಗೆ ತಕ್ಕ ವರನೆಂದರೆ ಶಿವಪುತ್ರನಾದ ಕುಮಾರಸ್ವಾಮಿಯೇ ಸರಿ. ಅವನಿಗೆ




ಕೂಡಾ ವಳ್ಳಿಗಿಂತ ತಕ್ಕವಳು ಬೇರೆ ಯಾರೂ ದೊರಕರು. ಬೇಗದಲ್ಲೇ ಕುಮಾರಸ್ವಾಮಿ ವನ ವಿಹಾರಕ್ಕೆ ಬಂದು ವಳ್ಳಿಯನ್ನು ನೋಡಿ ಒಲಿಯುತ್ತಾನೆಂದು ನಂಬು. ನೀನೇನೂ ಹೆಚ್ಚಿನ ಪ್ರಯತ್ನ ಮಾಡಬೇಕಾಗಿಲ್ಲ. ಅವನಾಗಿಯೇ ನಿಮ್ಮ ಅಳಿಯನಾಗುತ್ತಾನೆ. ನೀವೆಲ್ಲಾ ಧನ್ಯರಾಗುವಿರಿ. ಶಿವನೇ ಸಂಬಂಧಿಕನಾಗುವುದಕ್ಕಿಂತ ಹೆಚ್ಚಿನ ಭಾಗ್ಯ ಬೇರೇನಿದೆ ? " ಎಂದು ಪುಳಿಂದನೊಂದಿಗೆ ಹೇಳಿ ನಾರದನು ತನ್ನ ದಾರಿ ಹಿಡಿದು ಹೊರಟುಹೋದನು.

ನಾರದನು ವಳ್ಳಿಯ ಸೌಂದರ್ಯವನ್ನು ಕುರಿತು ಹೇಳಿದ ಮಾತು ಕುಮಾರಸ್ವಾಮಿಯ ಮನಸ್ಸಿನಲ್ಲಿ ಸವಿಯಾದ ಅಲೆಗಳನ್ನು ಎಬ್ಬಿಸಲು ತೊಡಗಿತು. ಅವಳನ್ನು ಮದುವೆ ಮಾಡಿಕೊಳ್ಳಬೇಕೆಂಬ ಬಯಕೆ ಅವನ ಮನಸ್ಸಿನಲ್ಲಿ ತಲೆ ಎತ್ತಿತು. ಭಿಲ್ಲರ ಹುಡುಗಿಯನ್ನು ಮದುವೆಯಾಗುವೆನೆಂದರೆ ತಂದೆತಾಯಿಗಳು ಒಪ್ಪುವರೋ ಇಲ್ಲವೋ ಎಂಬ ಸಂದೇಹ ಬೇರೆ ಬಂತು. ತಾನು ಯಾವ ನಿರ್ಣಯ ಮಾಡಬೇಕಾದರೂ ಮೊದಲು ಅವಳನ್ನು ನೋಡಿಬಿಡುವುದು ಒಳ್ಳೆಯದೆಂದುಕೊಂಡನು. ಅದಕ್ಕಾಗಿ ಅವನು ತನ್ನ ಪರಿವಾರವನ್ನು ಕರೆದುಕೊಂಡು, ಭಿಲ್ಲಪುರದ ಸಮೀಪಕ್ಕೆ ಹೋಗಿ ಅಲ್ಲಿಯ ವನದಲ್ಲಿ ವಿಹರಿಸಲು ತೊಡಗಿದನು.

ನಾರದನ ಮಾತುಗಳು ಕುಮಾರಸ್ವಾಮಿಯನ್ನು ಚಂಚಲಗೊಳಿಸಿದಂತೆಯೇ, ವಳ್ಳಿಯನ್ನು ಕೂಡಾ ಚಂಚಲಗೊಳಿಸಿದ್ದಿತು. ಪುಳಿಂದನೊಂದಿಗೆ ನಾರದನು ಹೇಳಿದುದನ್ನೆಲ್ಲ ಮರೆಯಲ್ಲಿದ್ದು ಅವಳೂ ಕೇಳಿದ್ದಳು. ಕುಮಾರಸ್ವಾಮಿ ತಾನಾಗಿ ಬರುವನೆಂದಿದ್ದಾನಷ್ಟೆ ? ಅವನು ಯಾವಾಗ ಬರುತ್ತಾನೋ ಎಂಬ ಆತುರದಿಂದ ಅವಳ ಕಣ್ಣುಗಳು ಅತ್ತಿತ್ತ ಸುಳಿದುಕೊಂಡೇ ಇದ್ದುವು. ಅಷ್ಟೊಂದು ಮೇಲ್ಮಟ್ಟದವನು ತನ್ನಂತಹ ಕೀಳ್ಮಟ್ಟದವಳನ್ನು ವರಿಸಿಕೊಳ್ಳುತ್ತಾನೆಯೇ ಎಂದು ಅವಳಿಗೆ ಸಂದೇಹ. ತನ್ನ ತಾಯಿ ತಂದೆಯರು ತನ್ನನ್ನು ಬೆಳೆಸಿದವರೇ ಹೊರತು ಹಡೆದವರು ಅಲ್ಲವೆಂಬುದು ಅವಳಿಗೆ ಸಮಾಧಾನ ಕೊಡುತ್ತಿತ್ತು. ಒಂದು ವೇಳೆ ಕುಮಾರಸ್ವಾಮಿ ತನ್ನನ್ನು ಮದುವೆ ಮಾಡಿಕೊಳ್ಳದಿದ್ದರೆ, ತಾನು ಶರೀರತ್ಯಾಗ ಮಾಡುವುದೇ ಸರಿಯೆಂದು ನಿಶ್ಚಯಮಾಡಿಕೊಂಡಳು ವಳ್ಳಿ.

ಆ ದಿನ ಅವಳು ತನ್ನ ತಂದೆತಾಯಿಗಳೊಂದಿಗೆ ಏನೂ ಹೇಳದೆ, ಕೆಲವಮಂದಿ ಗೆಳತಿಯರನ್ನು ಕೂಡಿಕೊಂಡು ವನವಿಹಾರ ಮಾಡಲು ಹೊರಟಳು. ಸ್ವಲ್ಪಹೊತ್ತು ವಿಹರಿಸಿ ಒಂದು ಸಣ್ಣ ಮಾವಿನ ಮರದ ಬುಡದಲ್ಲಿ ಕುಳಿತಳು. ಆಗ ಕುಮಾರಸ್ವಾಮಿ ತನ್ನವರೊಂದಿಗೆ ಅಲ್ಲಿಗೇ ಬಂದು ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಮರದ ಕೆಳಗೆ ಕುಳಿತುಕೊಂಡನು.

ಆಗ ವಳ್ಳಿಯ ಗೆಳತಿಯರಲ್ಲಿ ಒಬ್ಬಳು ಕುಮಾರಸ್ವಾಮಿಯ ಬಳಿಗೆ ಹೋಗಿ, "ಅಯ್ಯಾ, ನಮ್ಮ

ವನಕ್ಕೆ ಬಂದಿರುವ ನೀವು ಯಾರು? ಎಲ್ಲಿಂದ ಬಂದಿದ್ದೀರಿ? ಈ ಪುಷ್ಪವನವು ಪುಳಿಂದ ರಾಜ ಕುಮಾರಿಯಾದ ವಳ್ಳೀದೇವಿ ವಿಹರಿಸುವ ಸ್ಥಳ. ಈ ಪ್ರದೇಶಕ್ಕೆ ಗಂಡಸರಾರೂ ಬರಕೂಡದು. ನಿಮಗೆ ಗೊತ್ತಿಲ್ಲವೆಂದು ಕಾಣುತ್ತದೆ" ಎಂದಳು.

ಅವಳ ಮಾತು ಕೇಳುತ್ತಿದ್ದಂತೆ ಕುಮಾರ ಸ್ವಾಮಿಗೆ ಹೊಸ ಉತ್ಸಾಹವೆದ್ದಿತು. ಅವನು ಆ ಗೆಳತಿಯೊಂದಿಗೆ, "ನನ್ನ ಹೆಸರು ಕುಮಾರಸ್ವಾಮಿ. ನಾನು ಶಿವ ಪಾರ್ವತಿಯರ ಕುಮಾರ. ಸ್ವಂತ ಊರು ಕೈಲಾಸ. ನಿಮ್ಮ ವಳ್ಳಿಯ ಸಮಾಚಾರ ಕೇಳುವಂತಿದ್ದರೆ ಇನ್ನಿಷ್ಟು ಹೇಳು" ಎಂದನು.

"ಇದು ಭಿಲ್ಲರ ರಾಜ್ಯ. ರಾಜನಾದ ಪುಳಿಂದನು ಭಿಲ್ಲಪುರ ರಾಜಧಾನಿಯಲ್ಲಿದ್ದಾನೆ. ಅವನು ಈಶ್ವರ ಭಕ್ತನು. ಮಕ್ಕಳಿಲ್ಲದ ಅವನಿಗೆ ವನದಲ್ಲಿ ಸಿಕ್ಕಿದವಳು ವಳ್ಳಿ.. ಆದರೂ ಬಹು ಮುದ್ದಿನಿಂದ ಅವಳನ್ನು ಬೆಳೆಸಿದ್ದಾರೆ" ಎಂದಳು ಆ ಗೆಳತಿ.

"ಆ ನಿಮ್ಮ ವಳ್ಳಿಗೆ ಮದುವೆಯಾಯಿತೇನು?" ಎಂದು ಕುಮಾರಸ್ವಾಮಿ ಕೇಳಿದನು.

"ಸಂಬಂಧವು ಗೊತ್ತಾಗಿದೆ. ಇನ್ನು ಮೇಲೆ ಮದುವೆಯಾಗಬೇಕು" ಎಂದಳು ಗೆಳತಿ.

ಕುಮಾರಸ್ವಾಮಿ ಉತ್ಸಾಹದಿಂದ, "ಅದೆಂತಹ ಸಂಬಂಧ? ಯಾರೊಂದಿಗೆ? ವರನು ಯಾರು?" ಎಂದು ಕೇಳಿದನು.

"ನಿನ್ನೆ ನಮ್ಮ ರಾಜನ ಹತ್ತಿರ ನಾರದಮುನಿ ಬಂದಿದ್ದನು. ಶಿವನ ಕುಮಾರನಾದ ಕುಮಾರಸ್ವಾಮಿ ಬಂದು ನಮ್ಮ ವಳ್ಳಿಯನ್ನು ಮದುವೆ ಮಾಡಿ ಕೊಳ್ಳುತ್ತಾನೆಂದು ರಾಜನೊಂದಿಗೆ ಹೇಳಿ ಹೋದನು. ಅದನ್ನು ವಳ್ಳಿಯೂ ಕೇಳಿಸಿಕೊಂಡಳು. ಆಗಿನಿಂದ ನಮ್ಮ ವಳ್ಳಿ ಆ ಕುಮಾರಸ್ವಾಮಿಯನ್ನೇ ನೆನೆದು ಕೊಂಡು ಕಸಿವಿಸಿಯಾಗಿದ್ದಾಳೆ. ಈಗ ಅವಳಿಗೆ ಕ್ಷಣವು ಒಂದು ಯುಗದ ಹಾಗಾಗಿದೆ. ಅವಳ




ಸಂಕಟ ನೋಡಲಾಗದೆ ನಾವು ಅವಳನ್ನು ವನ ವಿಹಾರಕ್ಕೆ ಕರೆದುಕೊಂಡು ಬಂದೆವು. ಈಗ ಅವಳು ಆ ಮಾವಿನ ಮರದ ಬುಡದಲ್ಲಿ ಕುಳಿತಿದ್ದಾಳೆ. ನೀನು ಇಲ್ಲಿಯೇ ಇರು. ನಾನು ಹೋಗಿ ವಳ್ಳಿಯನ್ನು ಕರೆದುಕೊಂಡು ಬರುತ್ತೇನೆ" ಎಂದು ಹೇಳಿ ಆ ಗೆಳತಿ ಹೋಗಿ ವಳ್ಳಿಯನ್ನು ಕೈಹಿಡಿದು ಎಳೆದು ಕೊಂಡೇ ಬಂದಳು.

ಕುಮಾರಸ್ವಾಮಿ ವಳ್ಳಿಯ ಕೈಯನ್ನು ತಾನು ಹಿಡಿದು, "ವಳ್ಳೀ, ನಾನೇ ಕುಮಾರಸ್ವಾಮಿ. ನಿನ್ನನ್ನು ಮದುವೆಯಾಗಲಿಕ್ಕೇ ಬಂದೆನು" ಎಂದನು.

ವಳ್ಳಿ ತಲೆ ತಗ್ಗಿಸಿಕೊಂಡು, "ನನ್ನನ್ನು ಮದುವೆ ಯಾಗಬೇಕಾದರೆ ನನ್ನ ತಾಯಿ ತಂದೆಯರ ಅನುಮತಿ ಪಡೆಯಬೇಕು. ಲೋಕನಿಂದೆ ಬರುವಂಥ ಕೆಲಸ ಮಾಡಬಾರದು. ಸ್ವಲ್ಪಹೊತ್ತು ಇಲ್ಲಿಯೇ ಇರಿ. ನಾನು ಹೋಗಿ ತಾಯಿ ತಂದೆಯರ ಅನುಮತಿ ಕೇಳಿ ಬರುತ್ತೇನೆ" ಎಂದು ವಳ್ಳಿ ತುಂಬಿದ ಆನಂದ

ದೊಂದಿಗೆ ತನ್ನ ಕೈಯನ್ನು ಬಿಡಿಸಿಕೊಂಡು ಗೆಳತಿಯರೊಂದಿಗೆ ಬೇಗ ಬೇಗನೆ ಮನೆಗೆ ಹೋದಳು.

ಅವಳಿಂದ ಪುಳಿಂದನು ನಡೆದ ಸಂಗತಿಯನ್ನು ತಿಳಿದು ಅತ್ಯಂತ ಸಂಭ್ರಮದಿಂದ ತನ್ನ ಪರಿವಾರದವರನ್ನೆಲ್ಲಾ ಕರೆದುಕೊಂಡು ಕುಮಾರಸ್ವಾಮಿಯ ಬಳಿಗೆ ಬಂದನು. ಆ ರಾತ್ರಿ ಬೆಳಗಾಗುವ ಹೊತ್ತಿನಲ್ಲಿ ಒಳ್ಳೆಯ ಮುಹೂರ್ತವಿರುವುದೆಂದು ಹೇಳಿ ಕುಮಾರಸ್ವಾಮಿಯನ್ನೂ, ಅವನ ಪರಿವಾರವನ್ನೂ ತನ್ನೊಂದಿಗೆ ಕರೆದುಕೊಂಡು ಹೋಗಿ, ಬಿಡದಿಯಲ್ಲಿ ಕೂಡಿಸಿ ಉಪಚರಿಸಿದನು. ಆಮೇಲೆ ಮಗಳ ಮದುವೆಯ ಏರ್ಪಾಡಿಗೂ ತೊಡಗಿದನು.

ಈ ವಾರ್ತೆ ಆಗಲೇ ಶಿವ ಪಾರ್ವತಿಯರಿಗೂ ತಿಳಿಸಲಾಯಿತು. ಶಿವನೂ ಪಾರ್ವತಿಯೂ ಸಮಯಕ್ಕೆ ಸರಿಯಾಗಿ ಕೈಲಾಸದಿಂದ ಬಂದು ಕುಮಾರಸ್ವಾಮಿಯ ವಿವಾಹವನ್ನು ನಡೆಯಿಸಿದರು. ಆಮೇಲೆ ಶಿವ ಪಾರ್ವತಿಯರು ನೂತನ ವಧೂವರರನ್ನು ಕರೆದುಕೊಂಡು ಕೈಲಾಸಕ್ಕೆ ಹಿಂದಿರುಗಿದರು.

ಮುಂದೆ ಕಾಲವು ಕ್ರಮಿಸುತ್ತಿರಲು ಶೋಣಿತಪುರದಲ್ಲಿ ಗಜಾಸುರನೆಂಬವನು ಅವತರಿಸಿದನು. ಅವನು ಕೂಡಾ ಬ್ರಹ್ಮನನ್ನು ಧ್ಯಾನಿಸಿ ಘೋರವಾದ ತಪಸ್ಸು ಮಾಡಿ ಅನೇಕ ವರಗಳನ್ನು ಪಡೆದು ಉನ್ಮತ್ತತೆಯಿಂದ ಬೀಗಿದನು. ತನ್ನ ಬಲದಿಂದ ಮೂರು ಲೋಕಗಳನ್ನೂ ಗೆದ್ದು ತಾನೇ ಆಳಲಿಕ್ಕೂ ತೊಡಗಿದನು. ಪರಮ ಶಿವಭಕ್ತನಾದ ಗಜಾಸುರನ ಪಾಲನೆಯಲ್ಲಿ ಪ್ರಪಂಚದವರೆಲ್ಲಾ ಎಲ್ಲಾ ಸುಖಗಳನ್ನೂ ಅನುಭವಿಸುತ್ತಿದ್ದರು. ಪ್ರಜೆಗಳಿಗೆ ಯಾವ ಈತಿಬಾಧೆಗಳೂ ಇರಲಿಲ್ಲ.

ಒಂದು ದಿನ ನಾರದನು ಗಜಾಸುರನ ಬಳಿಗೆ ಹೋಗಿ, ಅವನಿಂದ ಅತಿಥಿ ಮರ್ಯಾದೆಗಳನ್ನು ಪಡೆದ ಮೇಲೆ, "ಗಜಾ! ನೀನು ದೊಡ್ಡ ಈಶ್ವರ ಭಕ್ತನು. ಶಿವನನ್ನು ನಿನ್ನ ಹೃದಯದೊಳಗೇ ಇರಬೇಕೆಂದು ಕೇಳಬಾರದೇನು?" ಎಂದನು.

ಈ ಮಾತು ಗಜಾಸುರನಿಗೆ ತುಂಬಾ ಪ್ರಿಯವಾಯಿತು. ಅವನು ತನ್ನ ಪೂಜೆಯಿಂದ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು ತನ್ನ ಹೃದಯದೊಳಗೇ ಇರಬೇಕೆಂದು ವರ ಕೇಳಿದನು. ಶಿವನು ಅದಕ್ಕೆ ಸಮ್ಮತಿಸಿ, ಗಜಾಸುರನ ಹೃದಯದೊಳಗೇ ಇದ್ದು, ಅವನ ಮಾನಸಿಕ ಪೂಜೆಗಳನ್ನು ಸ್ವೀಕರಿಸಿಕೊಳ್ಳ ತೊಡಗಿದನು.

ಶಿವನು ಎಲ್ಲಿ ಹೋದನೋ ಏನಾದನೋ ಎಂದು ಪಾರ್ವತಿಗೆ ತಿಳಿಯಲಿಲ್ಲ. ಅವಳು ರುದ್ರ ಗಣಗಳಿಂದ ಲೋಕಗಳಲ್ಲೆಲ್ಲಾ ಹುಡುಕಾಡಿಸಿದಳು. ಕಡೆಗೆ ಶಿವನು ಲಿಂಗರೂಪದಲ್ಲಿ ಗಜಾಸುರನ ಹೃದಯದೊಳಗೆ ಇರುವನೆಂಬ ಸಂಗತಿ ಅವಳಿಗೆ ತಿಳಿಯಿತು.





# ಶಿವಪುರಾಣ

ಪಾರ್ವತಿ ಮಹಾವಿಷ್ಣುವಿನ ಬಳಿಗೆ ಹೋಗಿ, "ಅಣ್ಣಾ, ನನಗೆ ದೊಡ್ಡ ಆಪತ್ತು ಬಂದಿದೆ. ನನ್ನ ಗಂಡನನ್ನು ಗಜಾಸುರನು ತನ್ನ ಹೃದಯದಲ್ಲಿ ಹುದುಗಿಸಿದ್ದಾನೆ. ಲಿಂಗರೂಪದಲ್ಲಿ ಅವನ ಹೃದಯದಲ್ಲಿದ್ದಾನೆ ನನ್ನ ಗಂಡ. ನೀನೇ ಆತನನ್ನು ಕೈಲಾಸಕ್ಕೆ ತಂದು ಸೇರಿಸಬೇಕು. ಬೇರೆ ಯಾರೊಡನೆ ಹೇಳಿಕೊಳ್ಳಲಿ ?" ಎಂದು ಪ್ರಾರ್ಥಿಸಿದಳು.

ವಿಷ್ಣು ಅವಳಿಗೆ ಹಾಗೆಯೇ ಮಾಡುವೆನೆಂದು ಭರವಸೆ ಕೊಟ್ಟನು. ಶಿವನು ಕೈಲಾಸಕ್ಕೆ ತಿರುಗಿ ಬರುವವರೆಗೆ, ಗಣಪತಿಗಳಲ್ಲಿ ಹಿರಿಯನಾದವನು ಕೈಲಾಸವನ್ನೂ ಪಾರ್ವತಿಯನ್ನೂ ಸಂರಕ್ಷಿಸುವಂತೆ ಏರ್ಪಡಿಸಿದನು ಮಹಾವಿಷ್ಣು.

ಆಮೇಲೆ ವಿಷ್ಣು ರುದ್ರ, ವೀರಭದ್ರ ಗಣಗಳೊಂದಿಗೆ ಬ್ರಹ್ಮನ ಬಳಿಗೆ ಹೋದನು. ಮಹಾವಿಷ್ಣು ತಲೆಹಾಕಿದ ಈ ಘನಕಾರ್ಯದ ಸಂಗತಿ ದೇವೇಂದ್ರಾದಿ ದೇವತೆಗಳಿಗೂ ಗೊತ್ತಾಗಿ ಅವರೂ ಉತ್ಸಾಹದಿಂದ ಬಂದರು.

ತರುವಾಯ ಎಲ್ಲರೂ ಮಹಾವಿಷ್ಣುವಿನ ಆದೇಶದಂತೆ ರೂಪವಲ್ಲಟ ಮಾಡಿಕೊಂಡು ರುದ್ರ ಗಣಗಳೊಂದಿಗೆ ಕೂಡಿ ಶೋಣಿತಪುರಕ್ಕೆ ಹೋದರು. ನಂದೀಶ್ವರನು ಗಂಗೆತ್ತಾಗಿ ಮಾರ್ಪಟ್ಟನು. ಉಳಿದವರು ಬಗೆಬಗೆಯ ವಾದ್ಯಗಳನ್ನು ಬಾರಿಸುವವರ ವೇಷದಲ್ಲಿದ್ದರು. ವಿಷ್ಣು ಗಂಗೆತ್ತನ್ನು ಆಡಿಸುವವನಾಗಿ ಮಾರ್ಪಟ್ಟನು. ಅವರೆಲ್ಲರೂ ಶೋಣಿತಪುರದ ಬೀದಿಗಳಲ್ಲಿ ತಿರುಗುತ್ತ ಗಂಗೆತ್ತನ್ನು ಆಡಿಸುತ್ತ ಶಿವಸ್ತೋತ್ರ ಮಾಡುತ್ತ ಎಲ್ಲರನ್ನೂ ಆನಂದಪಡಿಸಿಕೊಂಡಿದ್ದರು. ಜನರು ಉತ್ಸವಕ್ಕೆ ಬರುವಂತೆ ಅವರ ಆಟ ನೋಡಲು ಬರುತ್ತಿದ್ದರು.

ಒಂದು ಅದ್ಭುತವಾದ ಗಂಗೆತ್ತು ಬಂದು ಮನುಷ್ಯರು ಮಾಡುವ ಹಾಗೆ ಮಾಡುತ್ತದೆಂದೂ, ಹೇಳಿದ ಹಾಗೆ ಕುಣಿಯುತ್ತದೆಂದೂ ಕೇಳಿ, ಆ ಗಂಗೆತ್ತಿನ ಗುಂಪಿನವರನ್ನು ಗಜಾಸುರನು ತನ್ನ ಸಭೆಗೆ ಬರಮಾಡಿಸಿದನು. ಅಲ್ಲಿ ಗಂಗೆತ್ತು ಹಾಡಿಗೆ ತಕ್ಕ ಹಾಗೆ ನೃತ್ಯ ಮಾಡಿತು.

೯. ಗಜಾಸುರನ ಮರಣ



ಅವರು ಹಾಡುವ ಹಾಡೆಲ್ಲವೂ ಶಿವಸ್ತೋತ್ರಗಳಾಗಿದ್ದುವು. ಆ ಸ್ತೋತ್ರಗಳನ್ನು ಕೇಳುತ್ತಿದ್ದಂತೆ ಗಜಾಸುರನ ಹೃದಯದಲ್ಲಿದ್ದ ಶಿವಲಿಂಗವು ಮೆಲ್ಲನೆ ಉಬ್ಬುತ್ತ ದೊಡ್ಡದಾಗತೊಡಗಿತು.

ಲಿಂಗವು ದೊಡ್ಡದಾಗುತ್ತಿದ್ದಂತೆ ಗಜಾಸುರನ ಶ್ವಾಸನಾಳಕ್ಕೆ ಒತ್ತಡ ಬಂದು, ಅವನಿಗೆ ಉಸಿರಾಡಲಾಗಲಿಲ್ಲ. ಅವನು ತನಗೆ ಸಾಯುವ ಕಾಲ ಬಂತೆಂದು ತಿಳಿದು "ಹೇ! ಪರಮೇಶ್ವರಾ! ಕಾಪಾಡು! ನಿನ್ನಿಂದಲೇ ಸಾಯುತ್ತಿದ್ದೇನೆ" ಎಂದು ಕೂಗಿದನು.

"ಗಜಾ! ಈಗ ನಿನಗೆ ಸಾವು ಸಮೀಪಿಸಿತು. ಅದಕ್ಕಾಗಿ ಚಿಂತಿಸಬೇಡ. ಬೇಕಾದ ವರವನ್ನು ಕೇಳು" ಎಂದನು ಶಿವ.

"ನನ್ನ ತಲೆ ಪೂಜನೀಯವಾಗಿರುವಂತೆ ಮಾಡು. ನನ್ನ ಚರ್ಮವನ್ನು ನೀನು ಧರಿಸಬೇಕು. ನನಗೆ ಜನ್ಮರಾಹಿತ್ಯವು ಸಿಗಬೇಕು. ಈ ಮೂರು ವರಗಳನ್ನು ನನಗೆ ಕೊಡು ದೇವಾ!" ಎಂದು ಆರ್ತನಾಗಿ ಬೇಡಿಕೊಂಡನು ಗಜಾಸುರ.

ಶಿವನು ಅವನು ಕೇಳಿದ ವರಗಳನ್ನು ಕೊಟ್ಟನು. ಅವನು ಇಲಿಯ ರೂಪದಲ್ಲಿ ತನ್ನ ಹತ್ತಿರವೇ ಇರುವಂತೆ ಅನುಗ್ರಹಿಸಿ, ಗಜಾಸುರನ ಹೊಟ್ಟೆ ಸೀಳಿಕೊಂಡು ಹೊರಗೆ ಬಂದನು. ಅದರೊಂದಿಗೆ ಗಜಾಸುರನೂ ಸತ್ತುಬಿದ್ದನು.

ಇದನ್ನೆಲ್ಲ ನೋಡುತ್ತಿದ್ದ ಗಜಾಸುರನ ಪರಿವಾರದವರು ದೇವತೆಗಳ ಮೋಸವೆಂದು ಗರ್ಜಿಸಿ, ಯುದ್ಧಕ್ಕೆ ಬಂದರು. ಮಹಾವಿಷ್ಣು ಅವರೆಲ್ಲರನ್ನೂ ಸಂಹರಿಸಿಬಿಟ್ಟನು.

ತರುವಾಯ ಬ್ರಹ್ಮ, ವಿಷ್ಣು, ದೇವೇಂದ್ರ, ನಂದೀಶ್ವರ ಮೊದಲಾದವರು ತಮ್ಮ ನಿಜರೂಪ ಧರಿಸಿ ಶಿವನಿಗೆ ನಮಸ್ಕಾರ ಮಾಡಿದರು. ಅಲ್ಲಿಂದ ರುದ್ರಗಣಗಳನ್ನೆಲ್ಲಾ ಹಿಂದಿಟ್ಟುಕೊಂಡು ಕೈಲಾಸಕ್ಕೆ ಹಿಂದಿರುಗಿದರು. ಶಿವನು ತಾನು ಗಜಾಸುರನನ್ನು ಕೊಂದು ಬಂದಿರುವೆನೆಂದು ಪಾರ್ವತಿಗೆ ಸುದ್ದಿ ಕಳುಹಿಸಿದನು.

ಅದಕ್ಕಿಂತ ಮೊದಲೇ ಈ ವಾರ್ತೆಯನ್ನು ಕೇಳಿ ಸಂತೋಷದಲ್ಲಿದ್ದ ಪಾರ್ವತಿ, ತೈಲಾಭ್ಯಂಜನ ಮಾಡಿಕೊಂಡು ಗೃಹದೇವತೆಗಳನ್ನು ಪೂಜಿಸಲಿಕ್ಕಾಗಿ, ಗೃಹದ್ವಾರದಲ್ಲಿದ್ದ ಲಕ್ಷ್ಮೀ ಗಣಾಧಿಪತಿಗಳೊಂದಿಗೆ, "ಅಪ್ಪಗಳಿರಾ, ನಾನು ತೈಲಾಭ್ಯಂಜನಕ್ಕೆ ಹೋಗುತ್ತೇನೆ. ಎಚ್ಚರಿಕೆಯಿಂದ ಕಾದುಕೊಂಡಿರಿ! ನಾನು ಹೇಳುವವರೆಗೂ ಯಾರನ್ನೂ ಒಳಗೆ ಬರಲು ಬಿಡಬೇಡಿ" ಎಂದು ಹೇಳಿದಳು.

ಸ್ವಲ್ಪಹೊತ್ತಿಗೆ ನಂದೀಶ್ವರನೇ ಮೊದಲಾದವರು ಅಲ್ಲಿಗೆ ಬಂದು ಒಳಗೆ ಪ್ರವೇಶಿಸಲು ನೋಡಿದರು. ಆಗ ಲಕ್ಷ್ಮೀಗಣಪತಿಗಳು ಅವರನ್ನು ತಡೆದು, "ಅಮ್ಮನವರು ಅಭ್ಯಂಜನ ಸ್ನಾನದಲ್ಲಿದ್ದಾರೆ. ತಾನು ಹೇಳದೆ ಯಾರನ್ನೂ ಒಳಗೆ ಬಿಡಬಾರದೆಂದು



ಅಮ್ಮನವರ ಆಜ್ಞೆ. ಆದ್ದರಿಂದ ಎಲ್ಲರೂ ದೂರವೇ ಸಮಯ ಕಾದುಕೊಂಡು ನಿಲ್ಲಿರಿ" ಎಂದರು.

"ನಾವು ಈಶ್ವರಾಜ್ಞೆಯಿಂದ ಬಂದವರು. ಮೂರು ಲೋಕಗಳಲ್ಲಿಯೂ ಈಶ್ವರಾಜ್ಞೆಗೆ ಇದಿರಿಲ್ಲ. ಮಧ್ಯದಲ್ಲಿ ತಡೆಯಲು ನೀವಾರು?" ಎಂದು ರುದ್ರಗಣಗಳು, ಲಕ್ಷ್ಮೀಗಣಗಳೊಂದಿಗೆ ಹೋರಾಟಕ್ಕಿಳಿದರು. ಅಲ್ಲಿ ದೊಡ್ಡ ಕೋಲಾಹಲ ನಡೆಯಿತು.

ಈ ಕೋಲಾಹಲವನ್ನು ಕೇಳಿ ಪಾರ್ವತಿಯ ಪರಿಚಾರಿಕೆಯೊಬ್ಬಳು ಬಂದು ನೋಡಿ, ಪಾರ್ವತಿಯ ಬಳಿಗೆ ಓಡಿ, "ಅಮ್ಮಾ, ನಮ್ಮ ಲಕ್ಷ್ಮೀಗಣಗಳೂ, ರುದ್ರಗಣಗಳೂ ಹೊಡೆದಾಡಿಕೊಳ್ಳುತ್ತಿದ್ದಾರೆ" ಎಂದು ಹೇಳಿದಳು.

ರುದ್ರಗಣಗಳ ಪ್ರವರ್ತನೆಯಿಂದ ಪಾರ್ವತಿಗೆ ಕೋಪ ಬಂದಿತು. ಅವಳು ಕೂಡಲೇ ದೇವಗಣಗಳನ್ನು ಕರೆದು ಲಕ್ಷ್ಮೀಗಣಗಳಿಗೆ ಸಹಾಯಮಾಡುವಂತೆ ಹೇಳಿದಳು. ಲಕ್ಷ್ಮೀಗಣಗಳೂ ದೇವಗಣಗಳೂ ಒಂದಾಗಿ ರುದ್ರಗಣಗಳನ್ನು ಚೆನ್ನಾಗಿ ಹೊಡೆದು ಹಣ್ಣುಮಾಡಿಬಿಟ್ಟರು. ರುದ್ರಗಣಗಳು ತೀರಾ ಸೋತು ಹಿಂದೆ ಓಡಿದರು.

ಲಕ್ಷ್ಮೀಗಣಗಳ ಕೈಯಲ್ಲಿ ಓಡಿಹೋದ ರುದ್ರಗಣಗಳು ಶಿವನ ಹತ್ತಿರ ಬಂದು ಮೊರೆ ಇಟ್ಟರು. ಆಗ ಅಲ್ಲಿದ್ದ ನಾರದನು, "ಪಾರ್ವತಿಯ ದ್ವಾರಪಾಲಕರಿಗೆ ಇಷ್ಟು ಪೊಗರೇ? ಶಿವನ ಆಜ್ಞೆಯನ್ನೇ ಧಿಕ್ಕರಿಸುವುದುಂಟೆ? ಏನು ಕಾಲ ಬಂತಪ್ಪಾ!" ಎಂದು ಹೇಳಿಕೊಂಡನು.

ತನ್ನ ಭೃತ್ಯರು ಪೆಟ್ಟು ತಿಂದರೆಂದು ಕೇಳಿಯೇ ಕೋಪಗೊಂಡ ಶಿವನು, ನಾರದನು ಹೇಳಿಕೊಂಡುದನ್ನು ಕೇಳಿ ಇನ್ನಷ್ಟು ಕೆರಳಿದನು. ಅವನು ತನ್ನ ತ್ರಿಶೂಲವನ್ನು ಕಳುಹಿಸಿ, ಲಕ್ಷ್ಮೀಗಣಗಳ ತಲೆಗಳನ್ನು ಕಡಿಸಿಬಿಟ್ಟನು.

ತನ್ನ ಪ್ರೀತಿಯ ಕುಮಾರರ ತಲೆಗಳು ಬಿದ್ದುಹೋದುದನ್ನು ನೋಡಿ ಪಾರ್ವತಿ ದುಃಖಸಮುದ್ರದಲ್ಲಿ ಮುಳುಗಿದಳು.

ಪಾರ್ವತೀದೇವಿಯ ಮನೆಯ ದ್ವಾರದ ಹತ್ತಿರ ಈಗ ತಡೆಯುವವರಾರೂ ಇರಲಿಲ್ಲ. ಆದುದರಿಂದ ಶಿವನು ಬ್ರಹ್ಮ ವಿಷ್ಣುಗಳನ್ನು ಕರೆದುಕೊಂಡು ಪಾರ್ವತಿಯ ಮನೆಯೊಳಗೆ ಪ್ರವೇಶಿಸಿದನು. ಅಷ್ಟು ಹೊತ್ತಿಗೇ ಸ್ನಾನ ಮುಗಿಸಿ, ಅಲಂಕರಿಸಿಕೊಂಡು, ಗೃಹದೇವತೆಗಳನ್ನು ಪೂಜಿಸಿ ಮುಗಿಸಿದ್ದ ಪಾರ್ವತಿ ಲಕ್ಷ್ಮೀಗಣಗಳ ಸಾವಿನಿಂದ ದುಃಖದಲ್ಲಿ ಬಾಡಿಕೊಂಡಿದ್ದಳು. ಅಂತಲೇ ಬಂದವರನ್ನು ಅವಳು ಗೌರವಿಸಲಿಲ್ಲ.

ಶಿವನು ಪಾರ್ವತಿಯನ್ನು ಸಮಾಧಾನಪಡಿಸಬೇಕೆಂದು ಅವಳ ಹತ್ತಿರ ಬಂದನು. ಆದರೆ ಸಂತಪ್ತಳಾಗಿದ್ದ ಪಾರ್ವತೀದೇವಿ ಶಿವನನ್ನು ಕಣ್ಣೆತ್ತಿ ನೋಡಲೂ ಇಲ್ಲ.

ಆಗ ವಿಷ್ಣು ಪಾರ್ವತಿಯ ಹತ್ತಿರ ಬಂದು, "ತಂಗೀ, ಗಜಾಸುರನು ಸತ್ತುಹೋದುದಕ್ಕೆ ಮೂರು ಲೋಕಗಳೂ ಆನಂದದಲ್ಲಿ ಮುಳುಗಿರುವಾಗ ನೀನು ಇಷ್ಟು ದುಃಖದಲ್ಲಿ ಮುಳುಗುವಂತೆ ಏನಾಗಿದೆ? ನಿನಗೆ ಬಂದ ಕಷ್ಟವೇನೆಂದು ಹೇಳು. ನಾನು ತೀರಿಸುತ್ತೇನೆ" ಎಂದನು.

ಪಾರ್ವತಿ ವಿಷ್ಣುವನ್ನು ನೋಡಿ, "ಅಣ್ಣಾ, ಶಿವನು ನಿಷ್ಕಾರಣವಾಗಿ ನನ್ನ ಕುಮಾರರಾದ ಲಕ್ಷ್ಮೀಗಣಗಳನ್ನು ಕೊಂದುಬಿಟ್ಟನು. ಅವರನ್ನು ಬದುಕಿಸಿ, ಅವರಿಗೆ ತಕ್ಕ ಅಧಿಕಾರಗಳನ್ನು ಕೊಟ್ಟರೆ ಮಾತ್ರ ನನ್ನ ದುಃಖ ತೀರುವುದು" ಎಂದಳು.

ಆಗ ಶಿವನು ಗಜಾಸುರನಿಗೆ ತಾನು ಕೊಟ್ಟ ವರಗಳ ಸಂಗತಿಯನ್ನು ಕುರಿತು ಹೇಳಿದನು. ತನ್ನ ತಲೆ ಪೂಜನೀಯವಾಗಬೇಕೆಂದೂ, ತನ್ನ ಚರ್ಮವನ್ನು ಶಿವನು ಧರಿಸಬೇಕೆಂದೂ ಗಜಾಸುರನು ಕೇಳಿರುವುದನ್ನು ಹೇಳಿದನು ಶಿವ.

ಆದುದರಿಂದ ಲಕ್ಷ್ಮೀಗಣಗಳಿಗೆ ಅಧಿಪತಿಯಾದವನ ಶರೀರವನ್ನು ಸಭೆಗೆ ತರಿಸಲಾಯಿತು. ರುದ್ರಗಣಗಳನ್ನು ಕಳುಹಿಸಿ ಗಜಾಸುರನ ತಲೆಯನ್ನೂ ತರಿಸಿ, ಅದನ್ನು ಲಕ್ಷ್ಮೀಗಣಾಧಿಪತಿಯ ಶರೀರಕ್ಕೆ ಅಂಟಿಸಿದರು.

ಕೂಡಲೇ ಲಕ್ಷ್ಮೀಗಣಾಧಿಪತಿ, ನಿದ್ದೆಯಿಂದ ಎದ್ದವನ ಚಂದದಲ್ಲಿ ಎದ್ದು, ಪಾರ್ವತಿಗೂ ಮಹಾವಿಷ್ಣುವಿಗೂ ನಮಸ್ಕಾರ ಮಾಡಿದನು. ಅದೇ ವಿಧವಾಗಿ ಉಳಿದ ಇಪ್ಪತ್ತು ಮಂದಿ ಗಣಾಧಿಪತಿಗಳ ಮುಂಡಗಳಿಗೂ ಆನೆಯ ತಲೆಗಳನ್ನು ತಗಲಿಸಿದರು. ಕೂಡಲೇ ಅವರು ಕೂಡಾ ಬದುಕಿದರು. ಹೀಗಾದುದನ್ನು ನೋಡಿ ಪಾರ್ವತಿ ಬಹಳ ಸಂತೋಷಪಟ್ಟು ಸ್ಮಿತಮುಖಳಾದಳು. ಅದನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು. ಎಲ್ಲರೂ ಉತ್ಸಾಹದಿಂದ ಸಭೆಯಾಗಿ ಸೇರಿದರು.




ಆ ಬಗೆಯ ಪರಮಾನಂದದ ಸಭೆಯಲ್ಲಿ, ವಿಶ್ವದರ್ಶಿ ಎಂಬ ಉಪಬ್ರಹ್ಮನು ಎದ್ದುನಿಂತು, "ಓ ಶಿವಪಾರ್ವತಿಗಳೇ! ನನ್ನ ಕುಮಾರಿಯರಾದ ಜಯಲಕ್ಷ್ಮಿ ಮೊದಲಾದವರನ್ನು ಈ ಲಕ್ಷ್ಮೀಗಣಾಧಿಪತಿಗಳಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದೇನೆ. ಅಪ್ಪಣೆಯೆ?" ಎಂದು ಕೇಳಿದನು.

ಆ ಮಾತು ಕೇಳಿ ಎಲ್ಲರೂ ಸಂತೋಷಪಟ್ಟು ಒಪ್ಪಿಗೆ ನೀಡಿದರು. ಬ್ರಹ್ಮನು ತಾನೇ ಪುರೋಹಿತನಾಗಿದ್ದು ವಿಶ್ವದರ್ಶಿಯ ಕುಮಾರಿಯರನ್ನು ಗಣಾಧಿಪತಿಗಳೊಂದಿಗೆ ಮದುವೆ ಮಾಡಿದನು. ಆ ಗಣಾಧಿಪತಿಗಳಲ್ಲಿ ಲಕ್ಷ್ಮೀಗಣಾಧಿಪತಿ ದೊಡ್ಡವನು. ಅವನ ಹೆಂಡತಿಯ ಹೆಸರು ಜಯಲಕ್ಷ್ಮಿ. ಅವಳೇ ದೊಡ್ಡವಳು.

ಇಪ್ಪತ್ತೊಂದು ಮಂದಿ ಗಣಾಧಿಪತಿಗಳಿಗೂ, ವಿಶ್ವದರ್ಶಿ ಉಪಬ್ರಹ್ಮನ ಕುಮಾರಿಯರೊಂದಿಗೆ ಮದುವೆಯಾದ ಕೂಡಲೇ ಪಾರ್ವತಿ ಶಿವನೊಂದಿಗೆ,

"ಪರಮೇಶ್ವರಾ, ನನ್ನ ಕುಮಾರರಿಗೆ ಅಧಿಕಾರಗಳನ್ನು ಕೂಡಾ ಕೊಟ್ಟು ಗಜಾಸುರನಿಗೆ ಕೊಟ್ಟ ವರಗಳನ್ನು ಸಾರ್ಥಕ ಮಾಡಬೇಕು" ಎಂದು ಕೇಳಿಕೊಂಡಳು.

ಶಿವನು ಅವಳ ಅಪೇಕ್ಷೆಯನ್ನು ನೆರವೇರಿಸುವ ಆಲೋಚನೆಯಲ್ಲಿರುವಾಗ, ಅಲ್ಲಿಯೇ ಇದ್ದ ಕುಮಾರಸ್ವಾಮಿ ಮುಂದೆ ಬಂದು, ಪಾರ್ವತೀ ಪರಮೇಶ್ವರರಿಗೆ ವಂದಿಸಿ, ತನಗೆ ಕೂಡಾ ಗಣಾಧಿಪತ್ಯ ಕೊಡಬೇಕೆಂದು ಕೇಳಿಕೊಂಡನು.

"ನಿನಗೆ ಆಗಲೇ ದೇವಗಣಗಳ ಮೇಲೆ ಆಧಿಪತ್ಯ ಕೊಟ್ಟಿದ್ದೇವಷ್ಟೆ ? ಅದೇ ನಿನಗೆ ಸಾಕು. ರುದ್ರಗಣಗಳ ಮೇಲೆ ಅಧಿಕಾರವನ್ನು ಲಕ್ಷ್ಮೀಗಣಾಧಿಪತಿಗಳಿಗೆ ಕೊಡುತ್ತೇವೆ. ಅದಕ್ಕೆ ಒಪ್ಪಿಕೊಂಡುಬಿಡು" ಎಂದನು ಶಿವ.

ಆದರೆ ಕುಮಾರಸ್ವಾಮಿ ಅದಕ್ಕೆ ಒಪ್ಪದೆ, ತನಗೆ ಕೂಡಾ ಗಣಾಧಿಪತ್ಯವು ಬೇಕೇಬೇಕೆಂದು ಹಟ ಹಿಡಿದನು.

ಆಗ ಶಿವನು ಕುಮಾರಸ್ವಾಮಿಗೂ, ಲಕ್ಷ್ಮೀಗಣಾಧಿಪತಿಗಳಲ್ಲಿ ಹಿರಿಯನಿಗೂ ಒಂದು ಸ್ಪರ್ಧೆಯನ್ನು ನೆರವೇರಿಸಲು ಹೇಳಿದನು. ಅದೇನೆಂದರೆ, ಅವರಿಬ್ಬರೂ ತಮ್ಮ ತಮ್ಮ ವಾಹನಗಳ ಮೇಲೆ ಪುಣ್ಯಕ್ಷೇತ್ರಗಳ ದರ್ಶನ ಮಾಡುತ್ತ ಭೂಪ್ರದಕ್ಷಿಣೆ ಮಾಡಿ ಕೈಲಾಸಕ್ಕೆ ಹಿಂದಿರುಗಿ ಬರಬೇಕು. ಯಾರು ಮೊದಲು ಹಿಂದಿರುಗಿ ಬರುವರೋ ಅವರಿಗೇ ಸರ್ವಗಣಾಧಿಪತ್ಯವನ್ನೂ ಕೊಡಲಾಗುವುದು. ಇದಕ್ಕೆ ಅವರಿಬ್ಬರೂ ಒಪ್ಪಿದರು.

ಶಿವನು ಕುಮಾರಸ್ವಾಮಿಗೆ ವಾಹನವಾಗಿ ನವಿಲನ್ನು ಕೊಟ್ಟು, ಇಲಿಯ ರೂಪದಲ್ಲಿ ತನ್ನ ಹತ್ತಿರವಿರುವ ಗಜಾಸುರನನ್ನು ಲಕ್ಷ್ಮೀಗಣಾಧಿಪತಿಗೆ ವಾಹನವಾಗಿ ಕೊಟ್ಟನು. ಕೂಡಲೇ ಕುಮಾರಸ್ವಾಮಿ ನವಿಲಿನ ಮೇಲೆ ಏರಿ ರಿವ್ವನೆ ಆಕಾಶದಲ್ಲಿ ಹಾರಿ ಹೋದನು.

ಲಕ್ಷ್ಮೀಗಣಾಧಿಪತಿ ಪಾರ್ವತಿಯ ಬಳಿಗೆ ಹೋಗಿ, "ಅಮ್ಮಾ, ನನಗೆ ಎಷ್ಟು ಅನ್ಯಾಯವಾಗಿದೆಯೋ ನೋಡು ! ಕುಮಾರಸ್ವಾಮಿ ಆಜಾನುಬಾಹುವಾದ ಬಲಿಷ್ಠನು. ಅಂಥವನಿಗೆ ನವಿಲನ್ನು ವಾಹನವಾಗಿ ಕೊಟ್ಟರು. ನಾನು ಭಾರವಾದ ತಲೆಯಿಂದ ದೊಡ್ಡ ಹೊಟ್ಟೆಯಿಂದ ಇಲಿಯ ಮೇಲೆ ಹೇಗೆ ಪ್ರಯಾಣ ಮಾಡಲಿ ? ಇಂತಹ ಪರೀಕ್ಷೆ ಇಡುವುದಕ್ಕಿಂತಲೂ, ನಮಗೆ ಅಧಿಕಾರ ಕೊಡಲಾಗುವುದಿಲ್ಲವೆಂದು ಹೇಳಿದರೆ ಸರಿಯಾಗುತ್ತಿತ್ತು !" ಎಂದನು.

ಅದಕ್ಕೆ ಪಾರ್ವತಿ : "ನಾನೇನೂ ಮಾಡುವಂತಿಲ್ಲವಲ್ಲಪ್ಪಾ. ನಿನ್ನ ಮಾವಯ್ಯನಾದ ವಿಷ್ಣುವಿನ ಹತ್ತಿರ ಹೋಗಿ ಉಪಾಯ ಕೇಳು" ಎಂದು ಹೇಳಿದಳು.





# ಶಿವಪುರಾಣ

ಪಾರ್ವತಿ ಹೇಳಿದುದನ್ನು ಕೇಳಿ ಲಕ್ಷ್ಮೀಗಣಾಧಿಪತಿ ಮಹಾವಿಷ್ಣುವಿನ ಬಳಿಗೆ ಹೋಗಿ ತನಗೆ ನಡೆದ ಅನ್ಯಾಯವನ್ನು ಹೇಳಿಕೊಂಡು. "ನಾನು ಕುಮಾರಸ್ವಾಮಿಯೊಂದಿಗೆ ಸ್ಪರ್ಧೆಗೆ ನಿಂತು ಭೂಪ್ರದಕ್ಷಿಣೆ ಮಾಡಿ ಬರಲು ಸಾಧ್ಯವೆ? ಕುಮಾರಸ್ವಾಮಿ ಆಗಲೇ ಹೊರಟು ನವಿಲಿನ ಮೇಲೆ ಹಾರಿಕೊಂಡು ಹೋಗಿದ್ದಾನೆ. ಈಗ ನಾನೇನು ಮಾಡಲಿ? ನೀವೇ ಹೇಳಬೇಕು" ಎಂದನು.

ವಿಷ್ಣು ಆತನನ್ನು ನೋಡಿ. "ಅಪ್ಪಾ. ಇದಕ್ಕಾಗಿ ಚಿಂತಿಸಬೇಡ. ಶಿವ ಪಂಚಾಕ್ಷರೀ ಮಂತ್ರವನ್ನು ಐದು ಲಕ್ಷದಷ್ಟು ಜಪಿಸಿ, ಪಾರ್ವತೀ ಪರಮೇಶ್ವರರ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ ಮಾಡಿದೆಯೆಂದರೆ ನಿನಗೆ ಭೂಪ್ರದಕ್ಷಿಣೆ ಮಾಡಿದ ಫಲಿತವೂ ತೀರ್ಥಯಾತ್ರೆಗಳ ಫಲಿತವೂ ದಕ್ಕಿ ಬಿಡುತ್ತದೆ" ಎಂದು ಹೇಳಿದನು.

ಲಕ್ಷ್ಮೀಗಣಪತಿ ಹಾಗೆಯೇ ಶುಚಿರ್ಭೂತನಾಗಿ. ಒಂದು ಪ್ರಶಸ್ತ ಭಾಗದಲ್ಲಿ ದರ್ಭಾಸನದ ಮೇಲೆ ಕಣ್ಣುಮುಚ್ಚಿ ಕುಳಿತುಕೊಂಡು ಶಿವ ಪಂಚಾಕ್ಷರಿಯನ್ನು ಲೆಕ್ಕ ತಪ್ಪದಂತೆ ಜಪಿಸತೊಡಗಿದನು.

ಆ ಸಮಯದಲ್ಲಿ ಕುಮಾರಸ್ವಾಮಿ ನವಿಲಿನ ಮೇಲೆ ಹಾರುತ್ತಾ ಮೊದಲನೇ ತೀರ್ಥವನ್ನು ಸೇರಲಿರುವಾಗ. ಅಲ್ಲಿ ಲಕ್ಷ್ಮೀಗಣಪತಿ ತೀರ್ಥದಲ್ಲಿ ಸ್ನಾನಮಾಡಿ, ಆ ತೀರ್ಥದಿಂದ ಮತ್ತೊಂದು ತೀರ್ಥಕ್ಕೆ ಹೋಗುವಂತೆ ದೂರದಿಂದ ತೋರಿತು.

ಕುಮಾರಸ್ವಾಮಿ ಸಂಶಯಪಡುತ್ತ ಹತ್ತಿರ ಬಂದು ನೋಡುವಾಗ ಮರಳಿನಲ್ಲಿ ಇಲಿಯ ಪಾದಗಳ ಗುರುತು ಮೂಡಿರುವುದೂ ಕಂಡಿತು. ಅದನ್ನು ನೋಡಿ ಕುಮಾರಸ್ವಾಮಿಗೆ ಅತ್ಯಾಶ್ಚರ್ಯವಾಯಿತು.

ಕುಮಾರಸ್ವಾಮಿ ಆ ತೀರ್ಥ ಕ್ಷೇತ್ರದಲ್ಲಿದ್ದವರ ಹತ್ತಿರ. "ಅಯ್ಯಾ. ಇಲ್ಲಿಗೆ ದೊಡ್ಡ ಹೊಟ್ಟೆಯ ಗಿಡ್ಡನೊಬ್ಬನು ಇಲಿಯ ಮೇಲೇರಿಕೊಂಡು ಬಂದು ಸ್ನಾನಮಾಡಿ ಹೋದುದನ್ನು ನೋಡಿದಿರಾ?" ಎಂದು ವಿಚಾರಿಸಿದನು.

೧೦. ಗಣಾಧಿಪತಿ



"ಹೌದಪ್ಪಾ, ಹೌದು. ಈಗ ತಾನೇ ಹೋದನು. ಆಕೋ, ದೂರದಲ್ಲಿ ಇನ್ನೂ ಕಾಣುತ್ತಲೇ ಇದ್ದಾನೆ ನೋಡು. ದೊಡ್ಡ ಪುಣ್ಯಾತ್ಮ. ನಮಗೆಲ್ಲಾ ತಲಾ ಒಂದೊಂದು ಸುವರ್ಣದಾನ ಕೂಡಾ ಮಾಡಿದ! ಗಿಡ್ಡನಾದರೂ ದೊಡ್ಡ ಘನಶಾಲಿಯಾಗಿದ್ದಾನೆ" ಎಂದರು ಅಲ್ಲಿರುವವರು.

"ಆಹಾ! ಗಿಡ್ಡನು ಎಂಥಾ ಕೆಲಸ ಮಾಡುತ್ತಾನೆ! ಇಲ್ಲಿ ಸ್ನಾನಮಾಡುತ್ತಾ ಕಾಲಯಾಪನೆ ಮಾಡ ಬಾರದು. ಮೊದಲು ಬರುವ ತೀರ್ಥದಲ್ಲಿ ಸ್ನಾನ ಮಾಡುತ್ತೇನೆ" ಎಂದುಕೊಂಡು ಕುಮಾರಸ್ವಾಮಿ. ಮುಂದಿನ ಕ್ಷೇತ್ರಕ್ಕೆ ಹೋದನು. ಆದರೆ ಅವನು ಅಲ್ಲಿಗೆ ಸೇರುವಷ್ಟರಲ್ಲಿ ಲಕ್ಷ್ಮೀಗಣಪತಿ ಆ ಕ್ಷೇತ್ರದಲ್ಲಿ. ಸ್ನಾನ ಮುಗಿಸಿ ಹೊರಟು ಹೋಗುತ್ತಿರುವುದು ಸ್ಪಷ್ಟವಾಯಿತು!

ಎಲ್ಲಿಗೆ ಹೋದರೂ ಕುಮಾರಸ್ವಾಮಿಗೆ ಇದೇ ಅನುಭವವಾಯಿತು. ಅಂತಲೇ ಅವನು ಯಾವ ತೀರ್ಥವನ್ನೂ ಸೇವಿಸದೆಯೇ, ಭೂಪ್ರದಕ್ಷಿಣೆ ಮಾತ್ರ ಮಾಡಿ ಕೈಲಾಸಕ್ಕೆ ಬಂದು ಸೇರಿದನು. ಇಷ್ಟರೊಳಗೆ ಲಕ್ಷ್ಮೀಗಣಪತಿ ಐದು ಲಕ್ಷ ಶಿವ ಪಂಚಾಕ್ಷರೀ ಜಪಿಸಿ, ಪಾರ್ವತೀ ಪರಮೇಶ್ವರರ ಸುತ್ತಲೂ ಮೂರುಸಾರಿ ಪ್ರದಕ್ಷಿಣೆ ಮಾಡಿ ವಿನಯಂ ವಿಧೇಯತೆಗಳಿಂದ ನಿಂತನು.

ಸಭೆಯಲ್ಲಿರುವವರೆಲ್ಲರೂ ಗುಸಗುಸಲಾಡಿ ಕೊಂಡು, "ಈ ಲಕ್ಷ್ಮೀಗಣಪತಿ ಭೂಪ್ರದಕ್ಷಿಣೆ ಏನೂ ಮಾಡದೆ, ಏನೋ ಸುಲಭೋಪಾಯದಿಂದ ಗಣಾಧಿಪತ್ಯ ಸಂಪಾದಿಸಬಹುದೆಂದು ಯೋಚಿಸಿ ದ್ದಾನೆ" ಎಂದುಕೊಂಡರು.

ಆಗ ಕುಮಾರಸ್ವಾಮಿ ತಿರುಗಿಬಂದು ಪಾರ್ವತೀ ಪರಮೇಶ್ವರರೊಂದಿಗೆ, "ನಾನು ಗಣಾಧಿಪತ್ಯಕ್ಕೆ ಅರ್ಹನಾದವನಲ್ಲವೆಂದು ಈಗ ಚೆನ್ನಾಗಿ ತಿಳಿದು ಕೊಂಡೆನು. ಲಕ್ಷ್ಮೀಗಣಪತಿಗೇ ಗಣಾಧಿಪತ್ಯವನ್ನು ಕೊಡಿರಿ" ಎಂದು ಹೇಳಿದನು.

ಶಿವನ ಸಭೆಯಲ್ಲಿರುವವರೂ, ಪಾರ್ವತೀ ಪರ ಮೇಶ್ವರರೂ ಸಹಾ ಕುಮಾರಸ್ವಾಮಿಯ ಮಾತು ಕೇಳಿ ಆಶ್ಚರ್ಯಪಟ್ಟರು.

"ಹೀಗೇಕೆ ಹೇಳುವೆ ಕುಮಾರಸ್ವಾಮಿ?" ಎಂದು ಪಾರ್ವತಿ ಕೇಳಿದಳು.

"ನಾನು ಪ್ರಪಂಚದಲ್ಲಿರುವ ಎಲ್ಲಾ ಕ್ಷೇತ್ರಗಳಿಗೂ ಹೋದೆನು. ಆದರೆ ಯಾವ ತೀರ್ಥದಲ್ಲಿಯೂ ಸ್ನಾನಮಾಡಲಿಲ್ಲ. ಏಕೆಂದರೆ ಪ್ರತಿ ತೀರ್ಥದಲ್ಲಿಯೂ ಈ ಲಕ್ಷ್ಮೀಗಣಪತಿ ನನಗಿಂತ ಮೊದಲೇ ಸ್ನಾನಮಾಡಿ ಹೊರಟು ಹೋಗುವುದು ನನಗೆ ಕಂಡಿದೆ. ತೀರ್ಥ ಕ್ಷೇತ್ರಗಳಲ್ಲಿದ್ದವರು ಕೂಡಾ ಅದೇ ಮಾತನ್ನು ಹೇಳಿ ದರು. ಇವನು ನನಗಿಂತಲೂ ಎಷ್ಟೋಪಾಲು ಹೆಚ್ಚು ಶಕ್ತಿಯುಳ್ಳವನು. ರುದ್ರಗಣಗಳಿಗೆ ನಾಯಕ ನಾಗಿರಲು ಅವನೇ ತಕ್ಕವನು. ನಾನು ಅಲ್ಲವೇ ಅಲ್ಲ" ಎಂದನು ಕುಮಾರಸ್ವಾಮಿ.

ಯಾವುದರಿಂದಲೂ ನಮಗೆ ಸಾವು ಬರಬಾರದು. ಹಾಗೆ ವರವನ್ನು ಅನುಗ್ರಹಿಸು ! ಮತ್ತು ಸಕಲ ವಿದ್ಯೆಗಳೂ, ತಪಸ್ಸಿನ ಶಕ್ತಿಗಳೂ, ಐಶ್ವರ್ಯ, ಭೋಗಭಾಗ್ಯಗಳೂ, ಶಿವಭಕ್ತಿಯೂ, ಬೆಳ್ಳಿ ಬಂಗಾರ ಮತ್ತು ಕಬ್ಬಿಣಗಳಿಂದ ಮಾಡಲ್ಪಟ್ಟ ಮೂರು ನಗರಗಳೂ ನಮಗೆ ಬೇಕು" ಎಂದರು ಆ ಮೂವರೂ.

ಬ್ರಹ್ಮನು ಅವರು ಕೇಳಿದ ವರಗಳನ್ನೆಲ್ಲಾ ಕೊಟ್ಟು ಅವರಿಗೆ ವಾಸ ಮಾಡಲು ಬೇಕಾದಂತಹ ಪುರಗಳನ್ನು ನಿರ್ಮಿಸಿಕೊಡಲು ವಿಶ್ವಕರ್ಮನಿಗೆ ಅಪ್ಪಣೆಮಾಡಿ, ಅದೃಶ್ಯನಾದನು.



ವಿಶ್ವಕರ್ಮನು ಬಂಗಾರದಿಂದ, ಬೆಳ್ಳಿಯಿಂದ ಕಬ್ಬಿಣದಿಂದ ಮೂರು ಪುರಗಳನ್ನು ನಿರ್ಮಿಸಿ, ತಾರಕನ ಕುಮಾರರಿಗೆ ಒಪ್ಪಿಸಿದನು. ಅವುಗಳು ತ್ರಿಪುರಗಳೆಂದು ಪ್ರಸಿದ್ಧವಾದುವು. ಅವುಗಳಿಗೆ ಕಾಮಗಮನ ಶಕ್ತಿಯೂ ಇದ್ದುವು. ಅವುಗಳು ಮೂರೂ ಆಕಾಶದಲ್ಲಿ ನಿಂತಿರುತ್ತಿದ್ದುವು. ಅವುಗಳಲ್ಲಿ ಮನೆಗಳು, ಮರಗಳು, ಕೆರೆಕುಂಟೆ ಸರೋವರಗಳೂ ಇದ್ದುವು. ಧನಧಾನ್ಯ ಸಮೃದ್ಧಿಯೂ ಇದ್ದಿತು. ಬಂಗಾರದ ಪುರದಲ್ಲಿ ತಾರಕಾಕ್ಷನೂ, ಬೆಳ್ಳಿಯ ನಗರದಲ್ಲಿ ಕಮಲಾಕ್ಷನೂ, ಕಬ್ಬಿಣದ ಊರಿನಲ್ಲಿ ವಿದ್ಯುನ್ಮಾಲಿಯೂ ತಮ್ಮ ತಮ್ಮ ನಿವಾಸಗಳನ್ನು ಏರ್ಪಡಿಸಿಕೊಂಡು ಅವರುಗಳು ಮೂರು ಲೋಕಗಳಲ್ಲಿಯೂ ಸ್ವೇಚ್ಛೆಯಾಗಿ ತಿರುಗ ತೊಡಗಿದರು.

ಈ ತ್ರಿಪುರಗಳ ಹಾವಳಿ ಹೆಚ್ಚು ಹೆಚ್ಚಾಗುತ್ತಾ ಬರುತ್ತಿತ್ತು. ಅವುಗಳನ್ನು ಜಯಿಸಲು ಅಥವಾ ಹತೋಟಿಯಲ್ಲಿಡಲು ಇಂದ್ರನೇ ಮೊದಲಾದ ದೇವತೆಗಳಿಗೆ ಸಾಧ್ಯವಾಗುವ ಕಾರ್ಯವಲ್ಲ. ಅವರು ಬ್ರಹ್ಮನ ಬಳಿಗೆ ಹೋಗಿ, "ಮಹಾ ಪ್ರಭೂ ! ತ್ರಿಪುರಾಸುರರೆಂಬ ತಾರಕಾಸುರನ ಕುಮಾರತ್ರಯರು ನಮ್ಮನ್ನು ಅನೇಕಸಾರಿ ಕಾಡುತ್ತಿದ್ದಾರೆ. ಅವರ ನಗರಗಳು ಹಾರಿಬಂದು ನಮ್ಮ ಮನೆಮಾರುಗಳ ಮೇಲೆ ಎರಗಿ ಎಲ್ಲವನ್ನೂ ನೆಲಸಮ ಮಾಡುತ್ತಿವೆ. ಹೀಗೇ ಬಿಟ್ಟರೆ ಪ್ರಪಂಚವೆಲ್ಲಾ ಅಳಿದು ಹೋಗುವ ಭಯವಿದೆ. ಏನಾದರೂ ಮಾಡಿ ಕಾಪಾಡಬೇಕಾಗಿದೆ" ಎಂದು ಮೊರೆಯಿಟ್ಟುಕೊಂಡರು.

"ಹೌದು. ನನಗೂ ಗೊತ್ತಿದೆ. ಆ ತ್ರಿಪುರಾಸುರರು ಸುಲಭದಲ್ಲಿ ಸಾಯುವವರಲ್ಲ. ನಾವು ಹೋಗಿ ಶಿವನ ಆಲೋಚನೆ ಕೇಳೋಣ. ಬನ್ನಿ" ಎಂದು ಬ್ರಹ್ಮನು ದೇವತೆಗಳನ್ನೆಲ್ಲಾ ಕರೆದುಕೊಂಡು ಶಿವನ ಬಳಿಗೆ ಬಂದನು.

ಶಿವನು ಅವರು ಬಂದ ಕಾರ್ಯವನ್ನು ಕೇಳಿ ತಿಳಿದುಕೊಂಡು, "ಆ ತ್ರಿಪುರಾಸುರರನ್ನು ನಾನು ಕೊಲ್ಲಲಾರೆನು. ಬೇಕಾದರೆ ನನ್ನ ತೇಜಸ್ಸಿನಲ್ಲಿ ಅರ್ಧವನ್ನು ಕೊಡುತ್ತೇನೆ. ನೀವೇ ಅವರನ್ನು ಕೊಲ್ಲಬೇಕಷ್ಟೆ" ಎಂದನು.

ಆಗ ಬ್ರಹ್ಮನು ತ್ರಿಪುರಾಸುರರು ಕೇಳಿದ ವರಗಳ ವಿವರವನ್ನು ಹೇಳಿ, "ಓ ದೇವತೆಗಳೇ, ನೀವು

ನಮ್ಮ ತೇಜಸ್ಸುಗಳನ್ನು ಕೂಡಾ ತೆಗೆದುಕೊಂಡು ತ್ರಿಪುರಾಸುರರನ್ನು ನೀವೇ ಕೊಲ್ಲಬೇಕು" ಎಂದನು.

ರಥವಲ್ಲದ ರಥವೂ, ಬಿಲ್ಲಲ್ಲದ ಬಿಲ್ಲೂ, ಬಾಣವಲ್ಲದ ಬಾಣವೂ ತ್ರಿಪುರ ಸಂಹಾರಕ್ಕೆ ಬೇಕು. ಆದುದರಿಂದ ಶಿವನು ಭೂಮಿಯನ್ನು ರಥವಾಗಿ, ವೇದಗಳನ್ನು ರಥಾಶ್ವಗಳನ್ನಾಗಿ, ಸೂರ್ಯ, ಚಂದ್ರರನ್ನು ರಥದ ಚಕ್ರಗಳನ್ನಾಗಿ, ಮಿಂಚನ್ನು ಬಿಲ್ಲಾಗಿ ಮಾಡಿಕೊಳ್ಳಬೇಕೆಂತಲೂ, ಆದಿಶೇಷನನ್ನು ಬಿಲ್ಲಿನ ನಾಣಾಗಿಯೂ, ವಿಷ್ಣುಮೂರ್ತಿಯನ್ನು ನಾರಾಯಣಾಸ್ತ್ರವಾಗಿಯೂ ಉಪಯೋಗಿಸಿ ತ್ರಿಪುರ ಸಂಹಾರಮಾಡಬೇಕೆಂದು ನಿರ್ಧರಿಸಲಾಯಿತು. ಆ ಪ್ರಕಾರ ಶಿವನೇ ಮುಂದೆ ನಿಂತು ತ್ರಿಪುರಗಳನ್ನೂ ಹೊಡೆದನು. ಕೂಡಲೇ ಆ ಮೂರು ನಗರಗಳೂ ಸುಟ್ಟುಬೂದಿಯಾಗಿ ಭೂಮಿಯ ಮೇಲೆ ಉದುರಿದುವು. ಆದರಲ್ಲಿದ್ದ ರಾಕ್ಷಸರೂ ಬೂದಿಯಕಣಗಳಾದರು.

ತ್ರಿಪುರಾಸುರರು ನಾಶವಾಗಿ ಹೋದ ಮೇಲೆ ಜಲಂಧರನೆಂಬ ಮತ್ತೊಬ್ಬ ರಾಕ್ಷಸನು ಹೊರಟು ಲೋಕಗಳನ್ನು ಪೀಡಿಸ ತೊಡಗಿದನು. ಜಲಂಧರನ ನಿಜವಾದ ಹೆಸರು ಸೂಕರನೆಂದು. ಅವನು ಹಿರಣ್ಯಕಶಿಪುವಿನ ಹತ್ತನೆಯ ಮಗನಾದ ಅಗ್ನಿಜಿಹ್ವನ ಕುಮಾರ. ಅವನು ಬ್ರಹ್ಮನನ್ನು ಧ್ಯಾನಿಸಿ ಅತಿ ಘೋರವಾದ ತಪಸ್ಸನ್ನು ಮಾಡಿ, ದೇವಗಣಗಳಿಂದಾಗಲಿ, ರಾಕ್ಷಸಗಣಗಳಿಂದಾಗಲಿ, ನಾಗ, ಮಾನವ ಮೊದಲಾದವರಿಂದಾಗಲಿ, ತನಗೆ ಸಾವು ಬಾರದಂತೆಯೂ, ನೀರಿನೊಳಗೆ ವಾಸಮಾಡುವ ಶಕ್ತಿ ಬರುವಂತೆಯೂ ವರಗಳನ್ನು ಪಡೆದನು. ಆಮೇಲೆ ಅಷ್ಟ ದಿಕ್ಕುಗಳನ್ನೂ ಗೆದ್ದನು. ದೇವೇಂದ್ರನೇ ಮೊದಲಾದವರನ್ನು ಸ್ವರ್ಗದಿಂದ ಓಡಿಸಿ ಬಿಟ್ಟನು. ಹೀಗೆ ಸ್ವರ್ಗವನ್ನು ಆಕ್ರಮಿಸಿಕೊಂಡು ಆ ಜಲಂಧರನು ಮೂರು ಲೋಕಗಳಿಗೂ ತಾನೇ ಒಡೆಯನಾದನು.

ಜಲಂಧರನ ಮುಂದೆ ಸೋತು ಕೈಲಾಸದಿಂದ ಶಿವನೂ, ವೈಕುಂಠದಿಂದ ವಿಷ್ಣುವೂ ಓಡಿ ಹೋಗಿ ಇಬ್ಬರೂ ಮಾನಸ ಸರೋವರದೊಳಗೆ ಅಡಗಿಕೊಂಡರು. ಅಲ್ಲಿ ಅವರಿಬ್ಬರೂ ಒಂದಾಗಿ ಮಾತಾಡಿಕೊಂಡು, ಪರಬ್ರಹ್ಮವನ್ನು ಧ್ಯಾನಿಸಿ ತಪಸ್ಸು ಮಾಡಲು, ಪರಬ್ರಹ್ಮ ಸ್ವರೂಪನು ಪ್ರತ್ಯಕ್ಷನಾಗಿ ಶಿವನಿಗೆ ತ್ರಿಶೂಲವನ್ನೂ, ವಿಷ್ಣುವಿಗೆ ಸುದರ್ಶನ ಚಕ್ರವನ್ನೂ ಕೊಟ್ಟು, "ನೀವು ಒಬ್ಬರ ಆಯುಧಗಳನ್ನು ಮತ್ತೊಬ್ಬರು ಉಪಯೋಗಿಸಿಕೊಂಡು ಜಲಂಧರನನ್ನು ಕೊಂದುಬಿಡಿರಿ" ಎಂದು ಹೇಳಿ ಅದೃಶ್ಯನಾದನು.

ಶಿವ ವಿಷ್ಣುಗಳು ಸಂತೋಷಪಟ್ಟು ತಮ್ಮ ಆಯುಧಗಳನ್ನು ಬದಲಾಯಿಸಿಕೊಂಡು, ಜಲಂಧರನನ್ನು ಇದಿರು ನೋಡ ತೊಡಗಿದರು.





ಕಡೆಗೆ ವಿಷ್ಣು ದಂಭನ ಮುಂದೆ ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು.

"ಮಹಾವಿಷ್ಣು ದೇವಾ, ನನಗೆ ಬಲಶೌರ್ಯ ಪರಾಕ್ರಮಗಳಲ್ಲಿ ನಿನಗೆ ಸಮಾನನಾಗಿ, ಮೂರು ಲೋಕಗಳನ್ನೂ ಜಯಿಸಬಲ್ಲವನಾಗಿ, ಯಾರಿಂದಲೂ ಪರಾಜಯವಿಲ್ಲದವನಾಗಿ, ನಿನ್ನ ಮೇಲೆ ಭಕ್ತಿ ತುಂಬಿದವನಾಗಿ ಇರುವಂತಹ ಕುಮಾರನನ್ನು ಪ್ರಸಾದಿಸು" ಎಂದು ದಂಭನು ವಿಷ್ಣುವಿನೊಂದಿಗೆ ವರವನ್ನು ಕೇಳಿದನು.

ದಂಭನು ಕೇಳಿಕೊಂಡಂತೆ ವಿಷ್ಣು ವರಕೊಟ್ಟು ಮಾಯವಾದನು. ದಂಭನು ಮನೆಗೆ ಹಿಂದಿರುಗಿ ಬಂದು ತನಗೆ ಸಿಕ್ಕಿದ ವರದ ಶುಭವಾರ್ತೆಯನ್ನು ಹೆಂಡತಿಯೊಂದಿಗೆ ಹೇಳಿದನು. ಮುಂದೆ ಕೆಲವು ದಿನಗಳಲ್ಲಿ ದಂಭನ ಹೆಂಡತಿ ಗರ್ಭವತಿಯಾಗಿ ಒಂದು ಒಳ್ಳೆಯ ಮುಹೂರ್ತದಲ್ಲಿ ಒಬ್ಬ ಮಗನನ್ನು ಪ್ರಸವಿಸಿದಳು.

ತಂದೆ ತಾಯಿಯರು ಆ ಕುಮಾರನಿಗೆ ಶಂಖಚೂಡನೆಂದು ಹೆಸರಿಟ್ಟು ಬಹಳ ಪ್ರೀತಿಯಿಂದ ಬೆಳೆಸಿದರು.

ಕಾಲಕ್ರಮದಲ್ಲಿ ಶಂಖಚೂಡನು ಶುಕ್ರಾಚಾರ್ಯರ ಶಿಷ್ಯನಾಗಿ ಸಕಲ ವಿದ್ಯೆಗಳನ್ನೂ ಕಲಿತನು. ಹಾಗೆ ದೊಡ್ಡವನಾದ ಮೇಲೆ ತಂದೆ ತಾಯಿಯರ ಅನುಮತಿಯಿಂದ ವಿಂಧ್ಯಪರ್ವತಕ್ಕೆ ಹೋಗಿ ಅಲ್ಲಿ ಬ್ರಹ್ಮನನ್ನು ಕುರಿತು ಬಹಳ ನಿಷ್ಠೆಯಿಂದ ತೀವ್ರವಾಗಿ ತಪಸ್ಸು ಮಾಡಿದನು. ನಿರಾಹಾರಿಯಾಗಿ ಒಂಟಿ ಕಾಲಿನ ಮೇಲೆ ನಿಂತು ಶಂಖಚೂಡನು ಮಾಡುವ ಕಠಿಣ ತಪಸ್ಸಿಗೆ ಬ್ರಹ್ಮನು ಮೆಚ್ಚಿ ಅವನ ಇದಿರಿನಲ್ಲಿ ಪ್ರತ್ಯಕ್ಷನಾಗಿ "ಅಪ್ಪಾ, ಶಂಖಚೂಡಾ ! ನಿನ್ನ ತಪಸ್ಸಿಗೆ ಮೆಚ್ಚಿದೆನು. ಬೇಕಾದ ವರವನ್ನು ಕೇಳಿಕೋ" ಎಂದನು.

"ದೇವಾ, ನಾನು ದೇವ, ರಾಕ್ಷಸ, ನಾಗ, ಮಾನವ ಗಣಗಳನ್ನು ಜಯಿಸುವ ಬಲಪರಾಕ್ರಮಗಳನ್ನು ಹೊಂದಬೇಕು. ಮೂರು ಲೋಕಗಳನ್ನೂ ಜಯಿಸಿ ಪರಿಪಾಲಿಸುವವನಾಗಬೇಕು. ಸಕಲ ಭೋಗಗಳನ್ನೂ ಅನುಭವಿಸಬೇಕು. ಇದೇ ನನಗೆ ಬೇಕಾದ ವರ" ಎಂದನು ಶಂಖಚೂಡ.

ಬ್ರಹ್ಮದೇವನು ಅವನು ಕೇಳಿದ ವರವನ್ನು ಕೊಟ್ಟು, "ಅಪ್ಪಾ, ನೀನು ಬದರಿಕಾಶ್ರಮಕ್ಕೆ ಹೋಗು. ಅಲ್ಲಿ ತುಲಸಿ ಎಂಬ ಕನ್ಯೆ ತಪಸ್ಸುಮಾಡಿಕೊಂಡಿರುವುದನ್ನು ನೋಡುವಿ. ನೀನು ಅವಳನ್ನು ಮದುವೆಯಾಗಿ ಸುಖವಾಗಿರು" ಎಂದು ಹೇಳಿ ಅದೃಶ್ಯನಾದನು.

ಬ್ರಹ್ಮನಿಂದ ವರಗಳನ್ನು ಪಡೆದ ಶಂಖಚೂಡನು ಬ್ರಹ್ಮನ ಆದೇಶದಂತೆ ಬದರಿಕಾಶ್ರಮಕ್ಕೆ ಹೋಗಿ. ಅಲ್ಲಿ ತಪಸ್ಸಿನಲ್ಲಿ ಮಗ್ನಳಾದ ತುಲಸಿ ಎಂಬ ಕನ್ಯಾಮಣಿಯನ್ನು ನೋಡಿದನು. ಅವಳ ದಿವ್ಯ ಸೌಂದರ್ಯ ರಾಶಿಯನ್ನು ನೋಡಿ ಶಂಖಚೂಡನ ಮನಸ್ಸು ಅವಳ ಮೇಲೆ ಆಕರ್ಷಣೆ ಹೊಂದಿತು.



# ಶಿವಪುರಾಣ

ಯಾವಲೋಕಕ್ಕಾದರೂ ನಿರಾತಂಕವಾಗಿ ಹೋಗಬಲ್ಲವನೂ ಎಂತಹವರಿಂದಲೂ ಗೌರವ ಭಾವ ಹೊಂದುವವನೂ ಆದ ನಾರದನು ಜಲಂಧರನ ಬಳಿಗೆ ಹೋಗಿ, "ಜಲಂಧರಾ, ಶಿವನೂ ವಿಷ್ಣುವೂ ಮಾನಸ ಸರೋವರದಲ್ಲಿ ಅಡಗಿಕೊಂಡಿದ್ದಾರೆ" ಎಂದು ಹೇಳಿದನು.

ಅದು ತಿಳಿದ ಕೂಡಲೇ ಜಲಂಧರನು ಮಾನಸ ಸರೋವರಕ್ಕೆ ಹೋಗಿ, ನೀರಿನೊಳಗೆ ಮುಳುಗಿರುವ ಶಿವ, ವಿಷ್ಣುಗಳನ್ನು ಹುಡುಕಲು ತೊಡಗಿದನು. ಅವನು ತಮ್ಮನ್ನು ಹುಡುಕುವುದನ್ನು ಕಂಡು ಹಿಡಿದು ಶಿವನೂ ವಿಷ್ಣುವೂ ಅವನಿಗೆ ತಿಳಿಯದಂತೆ ತೀರಕ್ಕೆ ಬಂದು ಜಲಂಧರನು ನೀರಿನಿಂದ ಮೇಲೆ ಬರುವುದನ್ನೇ ನಿರೀಕ್ಷಿಸಿಕೊಂಡಿದ್ದರು. ಆಗ ಶಿವನ ಕೈಯಲ್ಲಿ ವಿಷ್ಣುವಿನ ಚಕ್ರವೂ, ವಿಷ್ಣುವಿನ ಕೈಯಲ್ಲಿ ಶಿವನ ತ್ರಿಶೂಲವೂ ಇದ್ದಿತು.

ಮಾನಸ ಸರೋವರದೊಳಗೆಲ್ಲಾ ಗಾಳಿಸಿ ನೋಡಿ, ಶಿವ ವಿಷ್ಣುಗಳನ್ನು ಕಾಣದೆ ಜಲಂಧರನು ಎದ್ದು ತೀರಕ್ಕೆ ಬಂದನು. ಆಗ ಅವನಿಗೆ ಅವರಿಬ್ಬರೂ ಕಾಣಿಸಿದರು. ಅವರನ್ನು ನೋಡಿದ ಕೂಡಲೆ ಜಲಂಧರನು ಸಂತೋಷಪಟ್ಟು, ಅವರೊಂದಿಗೆ ಯುದ್ಧಕ್ಕೆ ಕಲೆಬಿದ್ದನು. ಅವರಿಬ್ಬರೂ ಜಲಂಧರನನ್ನು ಎರಡು ಖಂಡಗಳನ್ನಾಗಿ ಮಾಡಿ ಕೊಂದು ಹಾಕಿದರು. ಜಲಂಧರನ ಮರಣವನ್ನು ನೋಡಿ ಮೂರು ಲೋಕಗಳೂ ಸಂತೋಷ ಪಟ್ಟವು.

ಕಶ್ಯಪ ಪ್ರಜಾಪತಿ ಪಡೆದ ಮಗಂದಿರಲ್ಲಿ ವಿಪ್ರಚಿತ್ತು ಎಂಬ ದಾನವನೊಬ್ಬನಿದ್ದನು. ಆ ವಿಪ್ರಚಿತ್ತುವಿಗೆ ದಂಭನೆಂಬ ಮಗನಿದ್ದನು. ದಂಭನು ದೊಡ್ಡ ವಿಷ್ಣು ಭಕ್ತನಾಗಿದ್ದನು. ಅವನು ಯಾವಾಗಲೂ ವಿಷ್ಣು ಪೂಜೆ ಮಾಡಿಕೊಂಡಿರುವವನು. ಆ ದಂಭನಿಗೆ ಬಹಳ ಕಾಲದವರೆಗೆ ಮಕ್ಕಳೇ ಹುಟ್ಟಲಿಲ್ಲ. ಆದುದರಿಂದ ಅವನು ಬದರಿಕಾಶ್ರಮಕ್ಕೆ ಹೋಗಿ, ವಿಷ್ಣುವನ್ನು ಧ್ಯಾನಿಸಿಕೊಂಡು ಒಂಟಿ ಕಾಲಲ್ಲಿ ನಿಂತು ದೀರ್ಘಕಾಲದವರೆಗೆ ಘೋರವಾದ ತಪಸ್ಸನ್ನು ಮಾಡಿದನು.

## ೧೧. ಶಂಖಚೂಡನ ತ್ರಿಲೋಕಾಧಿಪತ್ಯ



ಆವನು ಅವಳ ಹತ್ತಿರಕ್ಕೆ ಹೋಗಿ, "ಓ ಸುಂದರೀಮಣೀ ! ನೀನು ಎಲ್ಲಿಯವಳು ? ಈ ವನದಲ್ಲಿ ಒಬ್ಬಂಟಿಗಳಾಗಿ ಏತಕ್ಕೆ ತಪಸ್ಸು ಮಾಡುವಿ?" ಎಂದು ಕೇಳಿದನು.

ತುಲಸಿ ಕೂಡಾ ಶಂಖಚೂಡನನ್ನು ನೋಡಿ, ಆವನ ಅಂದಚೆಂದಗಳಿಗೆ ಸಂತೋಷಪಡುತ್ತ, ನಸುಲಜ್ಜೆಯಿಂದ, "ನಾನು ಧರ್ಮಧ್ವಜನೆಂಬ ರಾಜನ ಮಗಳು. ನನ್ನ ಹೆಸರು ತುಲಸಿ. ನನಗೆ ಮಹಾ ವೀರನೇ ಪತಿಯಾಗಬೇಕೆಂದು, ನಾನು ಮಹಾ ಪತಿವ್ರತೆಯಾಗಿ ಶಾಶ್ವತ ಕೀರ್ತಿಗೆ ಭಾಜನ ಳಾಗಬೇಕೆಂದು ಇಷ್ಟ ದೈವವನ್ನು ನೆನೆದು ತಪಸ್ಸು ಮಾಡಿಕೊಂಡಿದ್ದೇನೆ. ನೀನು ಯಾರು ?" ಎಂದು ಕೇಳಿದಳು.

"ನಾನು ದಂಭನೆಂಬ ದಾನವರಾಜನ ಮಗನು. ಶಂಖಚೂಡನೆಂಬುದು ನನ್ನ ಹೆಸರು. ನಾನು ತೀವ್ರವಾಗಿ ತಪಸ್ಸನ್ನು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ತ್ರಿಲೋಕಾಧಿಪತಿಯಾಗುವಂತೆ ವರವನ್ನು ಪಡೆದಿದ್ದೇನೆ. ನಿನ್ನನ್ನು ಮದುವೆ ಮಾಡಿಕೊಳ್ಳು ವಂತೆ ಬ್ರಹ್ಮನು ಅಪ್ಪಣೆ ಮಾಡಿದುದರಿಂದಲೇ ನಾನು ಇಲ್ಲಿಗೆ ಬಂದೆನು. ಆದುದರಿಂದ ನಿನ್ನ ಇಷ್ಟ ದಂತಹ ವರನು ನಾನೇ ಆಗಿರುವೆನೆಂದು ತಿಳಿದು, ನನ್ನ ಪತ್ನಿಯಾಗಲು ಒಪ್ಪಿಕೊಂಡುಬಿಡು" ಎಂದನು ಶಂಖಚೂಡ.

ಅವರಿಬ್ಬರೂ ಆಗಲೇ ಗಾಂಧರ್ವ ವಿಧಿಯಂತೆ ಮದುವೆಯಾಗಿ, ಬೆಟ್ಟಗಳಲ್ಲಿ, ನದೀತೀರಗಳಲ್ಲಿ, ವನಗಳಲ್ಲಿ ಸ್ವಲ್ಪಕಾಲದವರೆಗೆ ವಿಹರಿಸಿ, ತರುವಾಯ ಶಂಖಚೂಡನು ಅವಳೊಂದಿಗೆ ತನ್ನ ಮನೆಗೆ ಹೋದನು. ತಂದೆ ತಾಯಿಯರೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಆಗ ಗುರು ಶುಕ್ರಾ ಚಾರ್ಯನೂ ಅಲ್ಲಿದ್ದು ಶಂಖಚೂಡನು ಹೇಳಿದುದ ನ್ನೆಲ್ಲಾ ಕೇಳಿದನು. ಅವನು ಹೇಳಿದ ಶುಭಸಂಗತಿ ಗಳನ್ನು ಕೇಳಿ ಎಲ್ಲರಿಗೂ ಬಹಳ ಸಂತೋಷ ವಾಯಿತು. ಆಮೇಲೆ ಶುಕ್ರಾಚಾರ್ಯನ ಆದೇಶ ದಂತೆ ದಂಭನು ಶಂಖಚೂಡನಿಗೆ ಶುಭ ಮುಹೂರ್ತ ದಲ್ಲಿ ರಾಜ್ಯಾಭಿಷೇಕ ಮಾಡಿದನು.

ಶಂಖಚೂಡನು ತಂದೆಯಿಂದ ಪಡೆದ ರಾಜ್ಯ ವನ್ನೂ ಶುಕ್ರಾಚಾರ್ಯನ ಸಲಹೆಗಳ ಪ್ರಕಾರ ಒಳ್ಳೆಯ ರೀತಿಯಲ್ಲಿ ಪರಿಪಾಲಿಸುತ್ತ ದಾನವರಾಜ ಶ್ರೇಷ್ಠನೆಂಬ ಕೀರ್ತಿಯನ್ನು ಸಂಪಾದಿಸಿಕೊಂಡನು.

ಹೀಗೆ ಅವನು ಪರಿಪಾಲನೆ ಸಾಗಿಸಿಕೊಂಡಿರು ವಾಗ, ಒಂದು ದಿನ ಕೆಲವಂದಿ ದಾನವ ಪ್ರಮು ಖರೂ, ಶುಕ್ರಾಚಾರ್ಯನೂ ಕೂಡಿ ಬಂದು ಅವ ನೊಂದಿಗೆ, "ರಾಜಾ, ಬ್ರಹ್ಮನು ನಿನಗೆ ಅಪೂರ್ವ ವಾದ ವರಗಳನ್ನು ಕೊಟ್ಟಿರುವನಲ್ಲವೆ ? ನಮ್ಮ ಪೂರ್ವಿಕರಿಗೆ ದೇವೇಂದ್ರನೇ ಮೊದಲಾದವರು ಅನೇಕ ಬಗೆಯ ದ್ರೋಹಗಳನ್ನು ಮಾಡಿದ್ದಾರೆ. ಅದಕ್ಕೆಲ್ಲ ಪ್ರತೀಕಾರ ಮಾಡಬೇಕಾದ ಬಾಧ್ಯತೆ

ನಿನ್ನ ಮೇಲೆ ಬಿದ್ದಿದೆ. ಇದು ನಿನ್ನ ಕರ್ತವ್ಯ ಕೂಡಾ. ಮೊದಲು ನೀನು ಸೇನೆಗಳೊಂದಿಗೆ ಹೋಗಿ ಸ್ವರ್ಗಕ್ಕೆ ಮುತ್ತಿಗೆ ಹಾಕಿ ದೇವತೆಗಳನ್ನು ಓಡಿಸಿ ಸ್ವರ್ಗವನ್ನು ವಶಪಡಿಸಿಕೊಳ್ಳಬೇಕು. ಆಮೇಲೆ ಮುಂದಿನ ಕಾರ್ಯ ನಿನಗೇ ತಿಳಿಯುತ್ತದೆ" ಎಂದು ಹಿತನುಡಿಯನ್ನು ಹೇಳಿದರು.



ಶಂಖಚೂಡನು ಅವರು ಹೇಳಿದಂತೆಯೇ ಮಾಡಬೇಕೆಂದು ನಿಶ್ಚಯಿಸಿಕೊಂಡನು. ಆ ದಿಗ್ವಿಜಯ ಕಾರ್ಯಕ್ಕೆ ಹೊರಡಲು ಒಳ್ಳೆಯ ಮುಹೂರ್ತ ನೋಡುವಂತೆ ಶುಕ್ರಾಚಾರ್ಯನಿಗೆ ಹೇಳಿ, ಆ ಮುಹೂರ್ತದಲ್ಲಿ ತನ್ನ ಸೇನೆಗಳನ್ನು ಸಾಗಿಸಿಕೊಂಡು ಹೋಗಿ ಸ್ವರ್ಗಲೋಕವನ್ನು ಮುತ್ತಿದನು.

ಶಂಖಚೂಡನು ಸ್ವರ್ಗದ ಕಡೆಗೆ ದಂಡೆತ್ತಿಕೊಂಡು ಬರುವನೆಂಬ ವಾರ್ತೆ ಚಾರರ ಮೂಲಕ ದೇವೇಂದ್ರನು ಮುಂದಾಗಿಯೇ ಕೇಳಿ, ಕುಮಾರಸ್ವಾಮಿಯನ್ನೂ, ದೇವಗಣಗಳನ್ನೂ ಕರೆಯಿಸಿ, ಅವರೊಂದಿಗೆ ತಾನು ಕೂಡಾ ಯುದ್ಧಕ್ಕೆ ಸಿದ್ಧನಾಗಿ ನಿಂತನು.

ದೇವಗಣಗಳಿಗೂ, ದಾನವಗಣಗಳಿಗೂ ನಲುವತ್ತು ದಿನಗಳ ವರೆಗೆ ಅಹೋರಾತ್ರಿ ಎಡೆಬಿಡದೆ ದಾರುಣವಾದ ಯುದ್ಧವು ನಡೆಯಿತು. ಕಡೆಗೆ ಯುದ್ಧದಲ್ಲಿ ಹಿಮ್ಮೆಟ್ಟಬೇಕಾದ ಅಗತ್ಯ ದೇವಗಣಗಳಲ್ಲಿ ಕಂಡುಬರತೊಡಗಿತು. ದಾನವರಲ್ಲಿ ಇನ್ನೂ ಇನ್ನೂ ಮುನ್ನುಗ್ಗುವ ಉತ್ಸಾಹವೂ ಆವೇಶವೂ ಹೆಚ್ಚಾಗಿಯೇ ಕಂಡಿತು. ಹೀಗೆ ದಾನವರು ಮೇಲೆ ಮೇಲೆ ವಿಜೃಂಭಿಸಿಕೊಂಡು ಬರುವಾಗ ದೇವತೆಗಳು ಓಡಿ ಹೋಗಲಿಕ್ಕೂ ತೊಡಗಿದರು. ರಾಕ್ಷಸರಲ್ಲಿ ವಿಜಯದ ಉತ್ಸಾಹ!

ಇದನ್ನು ನೋಡಿದ ಮೇಲೆ ಇಂದ್ರನು ತನಗೆ ವಿಜಯವು ಸಾಧ್ಯವಿಲ್ಲವೆಂಬುದನ್ನು ತಿಳಿದು, ಶಂಖಚೂಡನಿಗೆ ಬ್ರಹ್ಮನು ಕೊಟ್ಟ ವರಗಳನ್ನೂ ನೆನಪಿಗೆ ತಂದುಕೊಂಡು, ದೇವತೆಗಳಿಗೆಲ್ಲಾ ಯುದ್ಧದಿಂದ ಹಿಂದಿರುಗುವಂತೆ ಹೇಳಿ, ತಾನೇ ಸ್ವತಃ ಶಂಖಚೂಡನ ಹತ್ತಿರ ಹೋಗಿ, "ಶಂಖಚೂಡಾ, ನೀನು ಕಶ್ಯಪ ಮಹರ್ಷಿಯ ಸಂತತಿಯವನು. ನಿನ್ನ ಶೌರ್ಯ ಬಲ ಪರಾಕ್ರಮಗಳಿಗೆ ತುಂಬಾ ಸಂತೋಷಿಸುತ್ತೇನೆ. ಇನ್ನುಮೇಲೆ ಯುದ್ಧಬೇಡ. ನೀನೇ ತ್ರಿಲೋಕಗಳನ್ನೂ ಪಾಲಿಸು. ನಾವೆಲ್ಲಾ ನಿನಗೆ ಸಹಾಯ ಮಾಡುತ್ತೇವೆ" ಎಂದನು.

ಶಂಖಚೂಡನು ಅದಕ್ಕೆ ಒಪ್ಪಿಕೊಂಡು, "ದೇವೇಂದ್ರಾ, ನೀನೇ ನನ್ನ ಪ್ರತಿನಿಧಿಯಾಗಿ ಸ್ವರ್ಗದಲ್ಲಿದ್ದು, ನನ್ನ ಆಜ್ಞೆಗೆ ಒಳಪಟ್ಟು ಪರಿಪಾಲನೆ ನಡೆಸು" ಎಂದನು. ಆಮೇಲೆ ಶಂಖಚೂಡನು ತಾನೇ ತ್ರಿಲೋಕಾಧಿಪತಿ ಎಂದು ಪ್ರಕಟಿಸಿ, ತನ್ನ ರಾಜಧಾನಿಯಾದ ಶೋಣಿತಪುರಕ್ಕೆ ಹಿಂದಿರುಗಿ ಅಲ್ಲಿಯೇ ಇದ್ದು ಮೂರು ಲೋಕಗಳನ್ನೂ ಆಳಲು ತೊಡಗಿದನು. ದೇವೇಂದ್ರನೇ ಮೊದಲಾದವರು

ದಿನಾ ಅವನನ್ನು ಸೇವಿಸುತ್ತ, ಅವನ ಆಜ್ಞೆಗಳನ್ನು ಪಾಲನೆ ಮಾಡಿಕೊಂಡಿದ್ದರು.

ಆದರೆ ಯಜ್ಞಯಾಗಗಳನ್ನು ಮಾಡುವವರು ಹವಿರ್ಭಾಗಗಳನ್ನು ಇನ್ನೂ ದೇವೇಂದ್ರನೇ ಮೊದಲಾದ ದೇವತೆಗಳಿಗೇ ಕೊಡುತ್ತಿದ್ದರು. ಅದನ್ನು ತಿಳಿದು ಶಂಖಚೂಡನು ಆ ಹವಿರ್ಭಾಗಗಳನ್ನು ದಾನವರಿಗೆ ಕೊಡಬೇಕೆಂದು ಋಷಿಗಳನ್ನೂ ಬ್ರಾಹ್ಮಣರನ್ನೂ ಬಲವಂತಪಡಿಸತೊಡಗಿದನು. ಅದಕ್ಕಾಗಿ ಶಂಖಚೂಡನ ದಾನವ ಭಟರು ಅಲ್ಲಲ್ಲಿ ತಿರುಗುತ್ತಾ ಋಷಿಗಳನ್ನು ಓಡಿಸಿ ಯಜ್ಞಯಾಗಗಳನ್ನು ಧ್ವಂಸ ಮಾಡಲು ಪ್ರಾರಂಭಿಸಿದರು.

ಈ ಕಾಟಗಳನ್ನು ತಾಳಲಾಗದೆ ಋಷಿಗಳೆಲ್ಲಾ ಮಹಾವಿಷ್ಣುವಿನ ಬಳಿಗೆ ಹೋಗಿ, "ಶಂಖಚೂಡನನ್ನು ಸಂಹರಿಸಿ ನಮ್ಮನ್ನು ಕಾಪಾಡಬೇಕು" ಎಂದು ಮೊರೆಯಿಟ್ಟುಕೊಂಡರು.

"ಶಂಖಚೂಡನು ನನ್ನ ಅಂಶದಿಂದಲೇ ಹುಟ್ಟಿದವನು. ಅವನ ಹೆಂಡತಿ ತುಲಸಿ ಲಕ್ಷ್ಮಿಯ ಅಂಶದಿಂದ ಹುಟ್ಟಿದ್ದಾಳೆ. ಆದುದರಿಂದ ನಾನು ಶಂಖಚೂಡನನ್ನು ಕೊಲ್ಲಲಾರೆನು. ನೀವು ಶಿವನ ಹತ್ತಿರ ಹೋಗಿ ಕೇಳಿಕೊಳ್ಳಿರಿ" ಎಂದನು ವಿಷ್ಣು.

ಋಷಿಗಳೆಲ್ಲಾ ಕೈಲಾಸಕ್ಕೆ ಹೋಗಿ, ತಮ್ಮನ್ನು ಶಂಖಚೂಡನ ಬಾಧೆಗಳಿಂದ ರಕ್ಷಿಸಬೇಕೆಂದು ಶಿವನಲ್ಲಿ ಬೇಡಿಕೊಂಡರು. ಶಿವನು ತಾನು ಶಂಖಚೂಡನೇ ಮೊದಲಾದ ದಾನವರನ್ನೆಲ್ಲ ಕೊಂದು, ಅವರ ಕಷ್ಟಗಳನ್ನು ಪರಿಹರಿಸುವುದಾಗಿ ಅಭಯ ವಚನವಿತ್ತು, ಅವರನ್ನೆಲ್ಲ ಕಳುಹಿಸಿದನು.

ಈ ಸಂಗತಿಯನ್ನು ತಿಳಿದು ನಾರದನು ಶಂಖಚೂಡನ ಬಳಿಗೆ ಹೋಗಿ, "ಶಂಖಚೂಡಾ, ನಿನ್ನನ್ನು ಕೊಲ್ಲುವುದಾಗಿ ಶಿವನು ಋಷಿಗಳಿಗೆ ಮಾತುಕೊಟ್ಟಿದ್ದಾನೆ. ಅವನು ಹಠಾತ್ತಾಗಿ ರುದ್ರಗಣಗಳೊಂದಿಗೆ ಬಂದು ನಿನ್ನ ಮೇಲೆ ಬೀಳುವ ಸಾಧ್ಯತೆಯಿದೆ. ನೀನು ಸುಮ್ಮನಿರದೆ, ಮೊದಲೇ ಸರ್ವ ಸೈನ್ಯದೊಂದಿಗೆ ಹೋಗಿ ಕೈಲಾಸವನ್ನು ಮುತ್ತಿ ಶಿವನನ್ನು ಅಲ್ಲೇ ತಟಸ್ಥಗೊಳಿಸುವುದು ಒಳ್ಳೆಯದು" ಎಂದು ಸಲಹೆ ಮಾಡಿ ಹೊರಟು ಹೋದನು.

ಶಂಖಚೂಡನು ನಾರದನ ಮಾತಿನ ಪ್ರಕಾರವೇ ಮಾಡುವುದು ಒಳಿತೆಂದು ಭಾವಿಸಿ, ತನ್ನ ಸೇನೆಯೊಂದಿಗೆ ಹೋಗಿ ಕೈಲಾಸವನ್ನು ಮುತ್ತಿಗೆ ಹಾಕಿದನು. ಅದನ್ನು ನೋಡಿ ಶಿವನು ಅವನೊಂದಿಗೆ ಯುದ್ಧ ಮಾಡಲು ಭದ್ರಕಾಳಿಯನ್ನೂ, ವೀರಭದ್ರಗಣಗಳನ್ನೂ, ಕುಮಾರಗಣಗಳನ್ನೂ ನಂದಿಯ ಮೂಲಕ ತನ್ನ ಬಳಿಗೆ ಕರೆಯಿಸಿದನು. ಹಾಗೆ ಶಿವನ ಆಜ್ಞೆಯಂತೆ ರುದ್ರಗಣಗಳಿಗೂ ದಾನವ ಸೇನೆಗಳಿಗೂ ದೊಡ್ಡ ಯುದ್ಧವು ಪ್ರಾರಂಭವಾಯಿತು.





# ಶಿವಪುರಾಣ

ರುದ್ರಗಣಗಳಿಗೂ, ದಾನವ ಸೇನೆಗಳಿಗೂ ಎಷ್ಟು ಕಾಲದವರೆಗೆ ಯುದ್ಧ ನಡೆದರೂ ಶಂಖಚೂಡನ ಸೇನೆಗಳು ಏನೂ ಕಡಿಮೆಯಾಗದಿರುವುದನ್ನು ನೋಡಿ ಶಿವನಿಗೆ ಆಶ್ಚರ್ಯವನ್ನುಂಟುಮಾಡಿತು. ಆಗ ಅವನು ವಿಷ್ಣುವನ್ನು ಸ್ಮರಿಸಿದನು. ವಿಷ್ಣು ಶಿವನ ಮುಂದೆ ಬಂದ ಕೂಡಲೇ ಶಿವನು, "ಮಹಾವಿಷ್ಣೂ! ಇಷ್ಟು ಕಾಲದಿಂದ ಯುದ್ಧ ನಡೆಯುತ್ತಿದ್ದರೂ ಶಂಖಚೂಡನ ಸೇನೆಗಳು ಸ್ವಲ್ಪವೂ ತಗ್ಗದೆ ಹಾಗೆಯೇ ಇದೆ, ಕಾರಣವೇನಿರಬಹುದು ?" ಎಂದು ಕೇಳಿದನು.

ಅದಕ್ಕೆ ವಿಷ್ಣು, "ಶಂಖಚೂಡನ ಹೆಂಡತಿಯಾದ ತುಲಸಿಯ ಪಾತಿವ್ರತ್ಯವು ಅವನ ಸೇನೆಗಳನ್ನು ಕಾಪಾಡಿಕೊಂಡಿದೆ. ಇದಕ್ಕೆ ಒಂದೇ ಉಪಾಯ. ನಾನು ತುಲಸಿಯ ಪಾತಿವ್ರತ್ಯವನ್ನು ಭಂಗಪಡಿಸುತ್ತೇನೆ. ಆಗ ನೀನು ಶಂಖಚೂಡನನ್ನು ಸಂಹರಿಸಿಬಿಡು" ಎಂದನು.

ಆಮೇಲೆ ವಿಷ್ಣು ಶಂಖಚೂಡನ ರೂಪವನ್ನು ಧರಿಸಿ, ಅವನ ಮನೆಗೆ ಹೋಗಿ ತುಲಸಿಯೊಂದಿಗೆ, "ನೋಡು ತುಲಸೀ, ನಾನು ಶಿವನೊಂದಿಗೆ ಯುದ್ಧ ಮಾಡುತ್ತಿದ್ದೇನೆ. ಜಯಾಪಜಯಗಳು ಇನ್ನೂ ತಿಳಿದಿಲ್ಲ. ನಿನ್ನನ್ನು ಸಂಧಿಸಿ ಬಹಳ ಕಾಲವಾಯಿತು. ನೋಡಿ ತೃಪ್ತನಾಗಿ ಹೋಗೋಣವೆಂದು ಬಂದೆನು" ಎಂದನು.

ತುಲಸಿ ಆ ಮಾತನ್ನು ನಂಬಿ ಸಂತೋಷಪಟ್ಟು ಆ ಮಾಯಾ ಶಂಖಚೂಡನನ್ನು ಬಗೆಬಗೆಯಾಗಿ ಉಪಚರಿಸಿ ಸಂತೋಷಪಡಿಸಿದಳು. ಇದರಿಂದಾಗಿ ಅವಳ ಪಾತಿವ್ರತ್ಯ ಹಾಳಾಯಿತು.

ಆಮೇಲೆ ಶಂಖಚೂಡನ ಸೇನೆಗಳು ವಿಪರೀತ ನಷ್ಟವಾದವು. ಶಿವನು ಸುಲಭವಾಗಿ ಶಂಖಚೂಡನನ್ನು ತನ್ನ ತ್ರಿಶೂಲದಿಂದ ಕೊಂದುಬಿಟ್ಟನು.

ಶಂಖಚೂಡನು ಸತ್ತ ದಿನ ರಾತ್ರಿ ತುಲಸಿ ತನ್ನ ಪಕ್ಕದಲ್ಲಿ ಮಲಗಿರುವ ವಿಷ್ಣುವಿನ ನಿಜರೂಪವನ್ನು ನೋಡಿದಳು. ನಿದ್ದೆಯಲ್ಲಿರುವಾಗ ವಿಷ್ಣುವಿನ ಮಾಯಾ ರೂಪ ಅಳಿದು ಹೋಗಿತ್ತು. ಹೀಗೆ ಮಾಯಾ ರೂಪದಿಂದ ಬಂದು ತನ್ನನ್ನು ಮೋಸಪಡಿಸಿದ ವಿಷ್ಣುವನ್ನು ಶಿಲೆಯಾಗಿ ಹೋಗುವಂತೆ ತುಲಸಿ ಶಾಪಕೊಟ್ಟಳು.

೧೨. ನಂದೀಶ್ವರನ ಕಥೆ




"ಹಾಗೇ ಆಗಲಿ ತುಲಸೀ. ನೀನು ಗಂಡಕೀ ನದಿಯಾಗಿ ಹರಿಯುತ್ತಿರುವಿ. ನಾನು ಸಾಲಿಗ್ರಾಮ ರೂಪದಲ್ಲಿ ಆ ನದಿಯಲ್ಲಿ ಶಾಶ್ವತವಾಗಿರುತ್ತೇನೆ. ಒಂದು ಗಿಡವು ನಿನ್ನ ಹೆಸರಿನಲ್ಲಿ ತುಲಸೀಗಿಡವೆನಿಸಿ ಆಚಂದ್ರಾರ್ಕ ಸ್ಥಾಯಿಯಾಗಿ ಪೂಜಿಸಲ್ಪಡುತ್ತದೆ" ಎಂದು ಹೇಳಿ ವಿಷ್ಣು ಅವಳನ್ನು ಗೋಲೋಕಕ್ಕೆ ಕರೆದು ಕೊಂಡು ಹೋದನು. ಅವಳಿದ್ದ ಸ್ಥಳದಿಂದ ಗಂಡಕೀ ನದಿ ಹರಿಯತೊಡಗಿತು.

ಪೂರ್ವ ಕಾಲದಲ್ಲಿ ಸಾಲಂಕಾಯನೆಂಬೊಬ್ಬ ಮುನಿಗೆ ಶಿಲಾದನೆಂಬ ಹೆಸರಿನ ಒಬ್ಬ ಮಗನಿದ್ದನು. ಆ ಶಿಲಾದನಿಗೆ ಸಂತಾನವಿಲ್ಲದೆ ಹೋಯಿತು. ಅವನು ಕೈಲಾಸಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಕುರಿತು ಘೋರ ತಪಸ್ಸು ಮಾಡಲು ತೊಡಗಿದನು. ಅವನ ತಪಸ್ಸಿಗೆ ಮೆಚ್ಚಿ ಪಾರ್ವತೀ ಪರಮೇಶ್ವರರು ಅವನ ಮುಂದೆ ಪ್ರತ್ಯಕ್ಷರಾದರು. ಶಿಲಾದನು ತನ್ನ ಕೋರಿಕೆಯನ್ನು ಹೇಳಿದನು. ಅದನ್ನು ಕೇಳಿ ಶಿವ ಪಾರ್ವತಿಯರು "ನಿನಗೆ ಸಂತಾನ ಪ್ರಾಪ್ತಿಯಿಲ್ಲ ದಿದ್ದರೂ, ಒಬ್ಬ ಮಗನು ಲಭಿಸುತ್ತಾನೆ" ಎಂದು ಹೇಳಿ ಅಂತರ್ಧಾನರಾದರು.

ಶಿಲಾದನು ತನ್ನ ಆಶ್ರಮಕ್ಕೆ ಹಿಂದಿರುಗಿದನು. ಆಮೇಲೆ ಎಷ್ಟು ಕಾಲ ಸಂದರೂ ಮಗನು ಲಭಿಸದೆ ಹೋದುದರಿಂದ ಒಂದು ಯಜ್ಞಮಾಡಲು ತಲೆಹಾಕಿದನು.

ಯಜ್ಞಕುಂಡಕ್ಕಾಗಿ ಶಾಸ್ತ್ರೀಯ ರೀತಿಯಲ್ಲಿ ನೆಲವನ್ನು ಅಗೆಯುತ್ತಿರುವಾಗ ಹೊಂಡದಿಂದ ಸುಂದರನಾದೊಬ್ಬ ಬಾಲಕನು ಎದ್ದು ನಿಂತನು. ಶಿಲಾದನು ಸಂತೋಷಪಟ್ಟು ಆ ಹುಡುಗನಿಗೆ ನಂದನೆಂದು ಹೆಸರಿಟ್ಟು ಬೆಳಸತೊಡಗಿದನು.

ಒಂದುಸಾರಿ ಮಿತ್ರಾವರುಣರೆಂಬ ಮುನಿಗಳು ಶಿಲಾದನ ಆಶ್ರಮಕ್ಕೆ ಬಂದು ನಂದನನ್ನು ನೋಡಿ, ಆ ಹುಡುಗನು ಅಲ್ಪಾಯುಷ್ಮದವನೆಂದು ಹೇಳಿದರು. ಆ ಕೆಟ್ಟ ಮಾತು ಕೇಳಿ ಶಿಲಾದನಿಗೆ ದೊಡ್ಡ ಚಿಂತೆ ಹಿಡಿಯಿತು.

ನಂದನು ತಂದೆಯ ಚಿಂತೆಗೆ ಕಾರಣವೇನೆಂದು ಒತ್ತಾಯಿಸಿ ತಿಳಿದು, ಕೇದಾರಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಧ್ಯಾನಿಸುತ್ತ ತಪಸ್ಸು ಮಾಡಲು ಕುಳಿತನು. ಬಹಳ ಕಾಲದ ಮೇಲೆ ಪಾರ್ವತೀ ಪರಮೇಶ್ವರರು ಅವನ ಮುಂದೆ ಪ್ರತ್ಯಕ್ಷರಾಗಿ, "ಬೇಕಾದ ವರವನ್ನು ಕೇಳು" ಎಂದು ಹೇಳಿದರು.

"ನಾನು ದೀರ್ಘಾಯುಷ್ಮಂತನಾಗಿ ಯಾವಾಗಲೂ ನಿಮ್ಮನ್ನು ಸೇವಿಸುತ್ತ ಲೋಕಪ್ರಸಿದ್ಧನಾಗಿ ಪೂಜಿಸಲ್ಪಡುವಂತೆ ವರವನ್ನು ಕೊಡಿರಿ" ಎಂದು ನಂದನು ಬೇಡಿಕೊಂಡನು.

ಪಾರ್ವತೀ ಪರಮೇಶ್ವರರು ಅವನಿಗೆ ಕೇಳಿದ ವರವನ್ನು ಕೊಟ್ಟು, ಅವನಿಗೆ ನಂದೀಶ್ವರನೆಂದು ಹೆಸರಿಟ್ಟು ಗಣಾಧಿಪತ್ಯವನ್ನು ಕೊಟ್ಟರು. ಶಿವನು ನಂದನಿಗೆ ಗಣಾಧಿಪತ್ಯವನ್ನು ಅಭಿಷೇಕಿಸಲು ತನ್ನ



ಜಟಾಜೂಟದಿಂದ ಗಂಗೆಯನ್ನು ಉಪಯೋಗಿಸಿದನು. ಆ ಅಭಿಷೇಕ ಜಲವು ಐದು ನದಿಗಳಾಗಿ, ತ್ರಿಸ್ರೋತಾ, ಜಟೋದರ, ಸ್ವರ್ಣೋದಕ, ಜಂಬೂ, ವೃಷಧ್ವಜ ಎಂಬ ಹೆಸರುಗಳನ್ನು ಪಡೆದು ಪ್ರವಹಿಸಿತು.

ಹೀಗೆ ಅಭಿಷೇಕಿಸಿದ ನಂದೀಶ್ವರನನ್ನು ಪಾರ್ವತೀ ಪರಮೇಶ್ವರರು ತಮ್ಮೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಹೋದರು. ತರುವಾಯ ನಂದೀಶ್ವರನು ಮರುತ್ತುಗಳ ಕುಮಾರಿಯಾದ ಸುಕೀರ್ತಿಯನ್ನು ಮದುವೆ ಮಾಡಿಕೊಂಡನು. ನಂದೀಶ್ವರನ ತಾಯಿ ತಂದೆಯರ ಕಡೆಯವರೆಲ್ಲಾ ಶಿವನ ಆಜ್ಞೆಯಂತೆ ರುದ್ರಗಣಗಳೊಂದಿಗೆ ಸೇರಿಹೋದರು.

ಮಹಾ ಸೃಷ್ಟಿಯ ಆದಿಕಾಲದಲ್ಲಿ ತ್ರಿಮೂರ್ತಿಗಳು ಹುಟ್ಟಿದ್ದರು. ಆಗ ಐದು ಮುಖಗಳಿರುವ ಬ್ರಹ್ಮನು ಶಿವನನ್ನೂ ವಿಷ್ಣುವನ್ನೂ ನೋಡಿ, "ನಾನೇ ನಿಮಗಿಂತ ಹೆಚ್ಚಿನವನಾದ ಪರಬ್ರಹ್ಮ ಸ್ವರೂಪದವನು. ಆದುದರಿಂದ ನೀವು ನನ್ನನ್ನೇ ಸೇವಿಸಬೇಕು" ಎಂದು ಹೇಳಿದನು.

ಬ್ರಹ್ಮನು ಹಾಗೆ ಹೇಳಿದುದನ್ನು ಕೇಳಿ ಶಿವನು ರೌದ್ರಾಕಾರವನ್ನು ತಾಳಿ ಒಂದು ಹೂಂಕಾರ ಮಾಡಲು, ಭಯಂಕರಾಕಾರದಲ್ಲಿ ಮೂರು ಕಣ್ಣುಗಳೊಂದಿಗೆ, ಬೆಳ್ಳಗಿನ ಶರೀರದಿಂದ, ತ್ರಿಶೂಲವೇ ಮೊದಲಾದ ಆಯುಧಗಳನ್ನು ಧರಿಸಿದ ಮೂರ್ತಿಯೊಂದು ಉದ್ಭವವಾಗಿ, ದಿಕ್ಕುಗಳು ದದ್ದರಿಸುವಂತೆ ಡಮರುಕವನ್ನು ಮೊಳಗಿಸುತ್ತ "ಪರಮೇಶ್ವರಾ! ನನ್ನನ್ನು ಏಕೆ ಹುಟ್ಟಿಸಿದೆ? ಏನು ಮಾಡಲಿ?" ಎಂದು ಮಾರ್ಮೊಳಗುವಂತೆ ಪ್ರಶ್ನಿಸಿದನು.

"ಈ ಬ್ರಹ್ಮನನ್ನು ಶಿಕ್ಷಿಸು" ಎಂದನು ಈಶ್ವರ. ಆಗ ಆ ರಾಕ್ಷಸಾಕಾರನು ಬ್ರಹ್ಮನಿಗಿರುವ ಐದು ತಲೆಗಳಲ್ಲಿ ನಡುವಿನ ತಲೆಯನ್ನು ತನ್ನ ಕಿರುಬೆರಳಿನ ಉಗುರಿನಿಂದ ಖಂಡಿಸಿ ತೆಗೆದು ಬಿಸುಟನು. ಆ ತಲೆ ಬಿದ್ದ ಸ್ಥಳವು ಬ್ರಹ್ಮಕಪಾಲವೆನಿಸಿತು. ಬ್ರಹ್ಮನ ತಲೆಯನ್ನು ಖಂಡಿಸಿದ ಸ್ಥಳವು ಕಾಶೀ.

ಹೀಗೆ ಬ್ರಹ್ಮನನ್ನು ಶಿಕ್ಷಿಸಲು ತಾನು ಸೃಷ್ಟಿಸಿದ ರಾಕ್ಷಸಾಕಾರನಿಗೆ ಶಿವನು ಕಾಲಭೈರವನೆಂದು ಹೆಸರು ಇಟ್ಟು, ತನ್ನ ಅಂಗರಕ್ಷಕನಾಗಿರುವಂತೆ ನಿಯಮಿಸಿದನು.

ಆದರೆ ಬ್ರಹ್ಮಹತ್ಯಾ ಪಾತಕವು ಭಯಂಕರ ರೂಪದಿಂದ ಕಾಲಭೈರವನ ಬೆನ್ನು ಹತ್ತಿಕೊಂಡಿತು. ಅದನ್ನು ನೋಡಿ ಈಶ್ವರನು, "ಕಾಲಭೈರವಾ, ನೀನು ಈ ಬ್ರಹ್ಮಹತ್ಯೆಯ ಪಾಪವನ್ನು ತೊಲಗಿಸಿಕೊಳ್ಳಲು ತೀರ್ಥಯಾತ್ರೆ ಮಾಡಿ, ಕಾಶೀಕ್ಷೇತ್ರಕ್ಕೆ ಹೋಗು. ಅಲ್ಲಿ ನಿನಗೆ ಬ್ರಹ್ಮಹತ್ಯಾ ಪಾತಕದಿಂದ ವಿಮುಕ್ತಿಯಾಗುತ್ತದೆ" ಎಂದು ಹೇಳಿ ಕಾಲಭೈರವನನ್ನು ಕಳುಹಿಸಿದನು.

ಆಮೇಲೆ ಕಾಲಭೈರವನು ಬಹಳ ಕಾಲದವರೆಗೆ ತೀರ್ಥಯಾತ್ರೆ ಮಾಡಿ, ಕಡೆಗೆ ಕಾಶೀ ಕ್ಷೇತ್ರವನ್ನು ತಲಪಿ ಗಂಗಾಸ್ನಾನಮಾಡಿ ಪವಿತ್ರನಾಗಿ, ಕಾಶಿಯಲ್ಲೇ

The Oriental Institute of ... Wadia ...

ಇದ್ದು, ಕಾಶೀ ನಗರಕ್ಕೆ ಕ್ಷೇತ್ರಪಾಲಕನಾಗಿ ಭಕ್ತರಿಂದ ಪೂಜಿಸಲ್ಪಡುತ್ತ ಬಂದನು.



ಒಂದಾನೊಂದು ಕಾಲದಲ್ಲಿ ವ್ಯಾಘ್ರಪಾದ ನೆಂಬೊಬ್ಬ ಮುನಿ ಇದ್ದನು. ಅವನ ಪತ್ನಿಯ ಹೆಸರು ವಿಮಲಾ. ಅವರಿಬ್ಬರೂ ಕಡು ನಿಷ್ಠರಾದ ಶಿವ ಭಕ್ತರಾಗಿದ್ದು, ಶಿವನನ್ನು ಆರಾಧಿಸಿಕೊಂಡಿರಲು, ಈಶ್ವರಾನುಗ್ರಹದಿಂದ ಒಬ್ಬ ಕುಮಾರನು ಅವರಿಗೆ ಹುಟ್ಟಿದನು. ಆ ಮಗನಿಗೆ ಅವರು ಉಪಮನ್ಯು ಎಂದು ಹೆಸರಿಟ್ಟರು.

ಶ್ರೀಮಂತರಾದ ವಿಮಲೆಯ ತೌರುಮನೆಯವರು ವಿಮಲೆಯನ್ನೂ, ಉಪಮನ್ಯುವನ್ನೂ ತಮ್ಮ ಮನೆಗೆ ಕರೆದುಕೊಂಡು ಹೋಗಿ, ಸ್ವಲ್ಪ ಕಾಲ ಇರಿಸಿ ಕೊಂಡು ಆ ಮೇಲೆ ವ್ಯಾಘ್ರಪಾದನ ಬಳಿಗೆ ಕಳುಹಿಸಿಕೊಟ್ಟರು.

ಐದು ವರ್ಷ ವಯಸ್ಸಿನ ಉಪಮನ್ಯು ಒಂದು ದಿನ ತನ್ನ ತಾಯಿಯೊಂದಿಗೆ, "ಅಮ್ಮಾ, ನನಗೆ ಹಾಲು ಬೇಕು, ಕೊಡಮ್ಮ" ಎಂದು ಕೇಳಿದನು.

"ನಮಗೆ ಹಾಲು ಎಲ್ಲಿಂದ ಬರುತ್ತದೆ ಕಂದಾ? ನಾವು ದರಿದ್ರರು. ನಿನ್ನ ಸೋದರ ಮಾವಂದಿರು ಧನವಂತರಾದುದರಿಂದ ಅಲ್ಲಿ ನಿನಗೆ ಹಾಲು ಮೊಸರು ಬೆಣ್ಣೆ ತುಪ್ಪ ಎಲ್ಲಾ ಸಿಗುತ್ತಿತ್ತು. ನಮ್ಮಲ್ಲಿ ಅದೇನೂ ಇಲ್ಲವಲ್ಲಪ್ಪಾ! ಹಾಗೆಲ್ಲಾ ಕೇಳಬಾರದು" ಎಂದು ವಿಮಲೆ ಮಗನಿಗೆ ತಿಳಿ ಹೇಳಿದಳು.

ಆದರೂ ಅವನು ಹಾಲಿಗಾಗಿ ಹಟ ಹಿಡಿಯಲು ಅವಳು ಬಿಳಿಹಿಟ್ಟನ್ನು ನೀರಲ್ಲಿ ಬೆರೆಸಿ ಕುಡಿಯಲು ಕೊಟ್ಟರೆ, ಉಪಮನ್ಯು ಅದನ್ನು ಕುಡಿಯದೆ ಒಂದೇ ಸಮನೆ ಅಳತೊಡಗಿದನು.

"ನಾವು ಗತಿಗೇಡಿಗಳಾದ ದರಿದ್ರರೆಂದು ಎಷ್ಟು ಹೇಳಿದರೂ ಹೀಗೆ ಅತ್ತರೆ ನಾನೇನು ಮಾಡಲಪ್ಪಾ!" ಎಂದಳು ತಾಯಿ.

"ನಮ್ಮ ದರಿದ್ರ ಹೋಗುವ ದಾರಿ ಯಾವುದು ಅಮ್ಮಾ?" ಎಂದು ಉಪಮನ್ಯು ಕೇಳಿದನು.

ವಿಮಲ ತನ್ನ ಮಗನನ್ನು ವ್ಯಾಘ್ರಪಾದನ ಬಳಿಗೆ ಕರೆದುಕೊಂಡು ಹೋಗಿ ನಡೆದ ಸಂಗತಿ ಯನ್ನೆಲ್ಲಾ ಹೇಳಿದಳು. ಅದನ್ನೆಲ್ಲ ಕೇಳಿ ವ್ಯಾಘ್ರ ಪಾದನು ಉಪಮನ್ಯುವಿಗೆ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಮಾಡಿ, "ನೀನು ಕೈಲಾಸ ಪರ್ವತಕ್ಕೆ ಹೋಗಿ ಈ ಮಂತ್ರವನ್ನು ಜಪಿಸಿದಿ ಯೆಂದರೆ ಪಾರ್ವತೀ ಪರಮೇಶ್ವರರು ಪ್ರತ್ಯಕ್ಷರಾಗಿ ನೀನು ಕೇಳುವ ವರವನ್ನು ಕೊಡುತ್ತಾರೆ" ಎಂದು ಹೇಳಿದನು.

ಉಪಮನ್ಯು ಕೈಲಾಸ ಪರ್ವತಕ್ಕೆ ಹೋಗಿ, ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ಕುಳಿತನು.

ಶಿವನು ವಿಕಾರವಾದ ರೂಪದಲ್ಲಿ ಉಪಮನ್ಯುವಿನ ಹತ್ತಿರ ಬಂದು, "ಏನಪ್ಪಾ, ಹುಡುಗಾ, ನಿರ್ಜನವಾದ ಈ ಬೆಟ್ಟದ ಅರಣ್ಯದಲ್ಲಿ ಹೀಗೆ ಕುಳಿತಿರುವಿ ಏಕೆ?

ಕ್ರೂರ ಪ್ರಾಣಿಗಳು ತಿರುಗುವ ಜಾಗವಿದು. ಮನೆಗೆ ಹೋಗಿಬಿಡು" ಎಂದನು.

"ನಾನು ನಿನ್ನ ಹತ್ತಿರ ಏನುಮಾಡಲಿ ಅಂತ ಕೇಳಲಿಲ್ಲ. ನನ್ನನ್ನು ಸುಮ್ಮನೆ ಮಾತಾಡಿಸದೆ ಹೋಗಿಬಿಡು. ನನಗೆ ಪಾರ್ವತೀ ಪರಮೇಶ್ವರರ ರಕ್ಷಣೆ ಇದೆ" ಎಂದು ಹೇಳಿ ಉಪಮನ್ಯು ಕಣ್ಣು ಮುಚ್ಚಿ ಮತ್ತೆ ಜಪಿಸಲು ತೊಡಗಿದನು.

ಮರುಕ್ಷಣದಲ್ಲಿ ಹುಲಿಯ ಗಾಂಡ್ರಿಕೆ, ಅದು ತನ್ನ ಮೇಲೆ ಬರುವ ಹಾಗೆ ಅವನಿಗೆ ಕೇಳಿಸಿತು. ಆದರೆ ಉಪಮನ್ಯು ಕಣ್ಣು ಬಿಡಿಸಲಿಲ್ಲ.

ಪಾರ್ವತೀ ಪರಮೇಶ್ವರರು ಬಾಲ ಉಪಮನ್ಯು ವಿನ ಧೈರ್ಯ ಸಾಹಸಗಳಿಗೆ ಮೆಚ್ಚಿ, ಅವನ ಇದಿರಿ ನಲ್ಲಿ ಪ್ರತ್ಯಕ್ಷರಾಗಿ ನಿಂತರು. ಅವನನ್ನು ಕರೆದು "ನಾವೇ ಬಂದಿದ್ದೇವೆ. ಬೇಕಾದ ವರ ಕೇಳಿಕೋ" ಎಂದರು ಶಿವಪಾರ್ವತಿಯರು.

ಶಿವನು ಪಾರ್ಥಿವಲಿಂಗ ರೂಪದಲ್ಲಿ ದಿನಾ ತನ್ನ ಪೂಜೆಗಳನ್ನು ಸ್ವೀಕರಿಸಬೇಕೆಂದು, ತನಗೆ ಅಷ್ಟೈಶ್ವರ್ಯಗಳೂ ಸಿದ್ಧಿಸಬೇಕೆಂದು ಉಪಮನ್ಯು ವರ ಕೇಳಿಕೊಂಡನು.

ಪಾರ್ವತೀ ಪರಮೇಶ್ವರರು ಅವನು ಕೇಳಿದ ವರಗಳನ್ನು ಕೊಟ್ಟರು. ಉಪಮನ್ಯು ತೃಪ್ತನಾಗಿ ಅಲ್ಲಿಂದ ಹೊರಟು ಮನೆಗೆ ಹಿಂದಿರುಗಿದನು.

ಆಮೇಲೆ ಅವನ ಸುಖಗಳಿಗೆ ಯಾವ ಕೊರತೆಯೂ ಬರಲಿಲ್ಲ.

ಆದಿ ಕಾಲದಲ್ಲಿ ದೇವತೆಗಳೂ ದಾನವರೂ ಯುದ್ಧಗಳನ್ನು ಬಿಡದೆ ಮಾಡಿಕೊಂಡಿರುವಾಗ, ದೇವತೆಗಳು ಅಧಿಕ ಸಂಖ್ಯೆಯಲ್ಲಿ ಸಾಯುತ್ತಿದ್ದರು. ಆಗ ದೇವತೆಗಳು ಮೇರುಪರ್ವತದ ಮೇಲೆ ಹೋಗಿ, ವಿಷ್ಣುವನ್ನು ದರ್ಶನಮಾಡಿ, ತಮಗೆ ಸಾವು ಬಾರದಂತೆ ಮಾಡಬೇಕೆಂದು ಬೇಡಿಕೊಂಡರು.

"ಹಾಗಾಗಬೇಕಾದರೆ ನೀವೂ ದಾನವರೂ ಕೂಡಿ ಕ್ಷೀರ ಸಾಗರದಲ್ಲಿ ಔಷಧಿಗಳನ್ನೆಲ್ಲಾ ಹಾಕಿ, ಮಂದರ ಪರ್ವತವನ್ನು ಕಡಗೋಲಿನ ಹಾಗೆ ಮಾಡಿ ಕಡೆಯಿರಿ. ಆಗ ಕ್ಷೀರಸಾಗರದಲ್ಲಿ ಒಳ್ಳೆಯ ಅಮೃತವು ಸಿಗುತ್ತದೆ. ಅದು ನಿಮಗೆ ಮರಣ ಬಾರದಂತೆ ಮಾಡುತ್ತದೆ" ಎಂದು ವಿಷ್ಣು ಅವ ರೊಂದಿಗೆ ಹೇಳಿದನು.

ದೇವತೆಗಳು ಹೋಗಿ ಮಂದರ ಪರ್ವತವನ್ನು ಕೀಳಲು ಪ್ರಯತ್ನಮಾಡಿದರು. ಎಷ್ಟೇ ಪ್ರಯತ್ನ ಮಾಡಿದರೂ ಮಂದರ ಪರ್ವತವು ಕದಲಲೇ ಇಲ್ಲ. ಆಗ ದೇವತೆಗಳು ಮತ್ತೆ ಮೇರುಪರ್ವತಕ್ಕೆ ಹೋಗಿ ವಿಷ್ಣುಮೂರ್ತಿಯೊಂದಿಗೆ, ಮಂದರ ಪರ್ವತವನ್ನು ಕೀಳಲು ತಮಗೆ ಸಾಧ್ಯವಾಗಲಿಲ್ಲ ವೆಂದು ಮೊರೆಯಿಟ್ಟುಕೊಂಡರು.





# ಶಿವಪುರಾಣ

ವಿಷ್ಣುಮೂರ್ತಿಯು ಆದಿಶೇಷನನ್ನು ನೋಡಿ, "ಶೇಷಾ, ಈ ದೇವತೆಗಳಿಗಾಗಿ ನೀನು ಮಂದರ ಪರ್ವತವನ್ನು ಕಿತ್ತು ತೆಗೆದುಕೊಂಡು ಹೋಗಿ ಸಮುದ್ರದಲ್ಲಿ ಹಾಕಿಬಿಟ್ಟು ಬಾ" ಎಂದು ಆಜ್ಞೆ ಮಾಡಿದನು.

ಆದರಂತೆ ಆದಿಶೇಷನು ಮಂದರ ಪರ್ವತವನ್ನು ಕಿತ್ತು ಎತ್ತಿಕೊಂಡು ಹೋಗಿ ಕ್ಷೀರ ಸಮುದ್ರದಲ್ಲಿ ಹಾಕಿಬಂದನು.

ಹಾಲಸಮುದ್ರವನ್ನು ಕಡೆದರೆ ಅಮೃತವು ಬರುತ್ತದೆ. ಹಾಗೆ ಬರುವ ಅಮೃತದ ಸ್ವಲ್ಪ ಭಾಗವನ್ನು ಸಮುದ್ರನಿಗೆ ಕೊಡುವುದೆಂದು ದೇವತೆಗಳು ಒಪ್ಪಿಕೊಂಡಿದ್ದರು.

ಆದರೆ ಅಷ್ಟರಿಂದ ಸಮುದ್ರವನ್ನು ಕಡೆಯುವ ಸಮಸ್ಯೆ ತೀರಿಹೋಗಲಿಲ್ಲ. ಮಂದರ ಪರ್ವತವು ಸಮುದ್ರದಲ್ಲಿ ಮುಳುಗಿ ಕಾಣದಂತಾಯಿತು. ಅದನ್ನು ಯಾರಾದರೂ ಎತ್ತಿ ಹಿಡಿದುಕೊಂಡರೇನೇ ದೇವದಾನವರು ಸಮುದ್ರವನ್ನು ಕಡೆಯಲು ಸಾಧ್ಯವಾಗುತ್ತಿತ್ತು. ಹಾಗೆ ಎತ್ತಿ ಹಿಡಿದು ಕಡೆಯಲಾಗುವಂತೆ ಮಾಡುವವರು ಯಾರಿದ್ದಾರೆ?

ದೇವತೆಗಳು ಮತ್ತೆ ವಿಷ್ಣುವನ್ನು ಪ್ರಾರ್ಥನೆ ಮಾಡಿಕೊಂಡರು. ಆಗ ವಿಷ್ಣು ದಯೆ ತೋರಿಸಿ ಮಹಾ ಕೂರ್ಮದ ರೂಪ ಧರಿಸಿ ತನ್ನ ಬೆನ್ನಿನಲ್ಲಿ ಮಂದರ ಪರ್ವತವನ್ನು ಮೇಲೆತ್ತಿ ಹಿಡಿಯಲು ಒಪ್ಪಿದನು.

ಅದೆಲ್ಲಾ ಸರಿಯಾಯಿತಾದರೂ, ಕಡೆಯಲು ಸರಿಯಾದ ಹಗ್ಗ ಸಿಗಲಿಲ್ಲ. ಆಗ ಮಹಾ ಸರ್ಪ ವಾಸುಕಿ ಮುಂದೆ ಬಂದು ತಾನು ಕಡಗೋಲಿನ ಹಗ್ಗವಾಗಲು ಒಪ್ಪಿಕೊಂಡನು. ಆದಾದ ಮೇಲೆ ದೇವತೆಗಳೂ ದಾನವರೂ ಹಾಲ ಸಮುದ್ರವನ್ನು ಮಥಿಸಲು ತೊಡಗಿದರು.

ಆಗಲೂ ಒಂದು ತಕರಾರು ಎದ್ದಿತು. ದೇವತೆಗಳು ವಾಸುಕಿಯ ತಲೆಯ ಭಾಗವನ್ನು ಹಿಡಿಯುವೆವೆನ್ನಲು, ದಾನವರು ಒಪ್ಪಲಿಲ್ಲ. "ನಾವು ವಾಸುಕಿಯ ಬಾಲ ಹಿಡಿಯುವುದೇ? ಎಂದಿಗೂ

## ೧೩. ಹಾಲಾಹಲ ಪ್ರಾಶನ



ಸಾಧ್ಯವಿಲ್ಲ" ಎಂದು ಪಟ್ಟು ಹಿಡಿದು ವಾಸುಕಿಯ ತಲೆಯ ಭಾಗವನ್ನೇ ಹಿಡಿದರು. ಬಾಲವನ್ನು ದೇವತೆಗಳೇ ಹಿಡಿಯಬೇಕಾಯಿತು.

ಅಂತೂ ಇಂತೂ ಹೀಗೆ ಸಮುದ್ರ ಮಥನವು ಪ್ರಾರಂಭವಾಯಿತು. ದೇವತೆಗಳೂ ದಾನವರೂ ದೀರ್ಘಕಾಲದವರೆಗೆ ಶ್ರಮವಹಿಸಿ ಹಾಲಸಮುದ್ರವನ್ನು ಕಡೆಯುವಾಗ ಅದರಿಂದ ಅಮೃತ ಬರುವುದಕ್ಕೆ ಮೊದಲು ಹಾಲಾಹಲವೆಂಬ ವಿಷರಸವು ಹೊರಟು ಅತಿ ವೇಗವಾಗಿ ಎಲ್ಲಾ ದಿಕ್ಕುಗಳಿಗೂ ಹರಡತೊಡಗಿತು.

ಅದನ್ನು ನೋಡಿ ಎಲ್ಲರೂ ಹೆದರಿ ನಡುಗುತ್ತ ಆರ್ತನಾದ ಮಾಡತೊಡಗಿದರು. ಯಾರಿಗೂ ಏನೂ ತೋರದೆ ಎಲ್ಲರೂ ವೇಗವಾಗಿ ಕೈಲಾಸ ಪರ್ವತಕ್ಕೆ ಹೋಗಿ, ಅಲ್ಲಿ ಪಾರ್ವತೀ ಸಹಿತನಾಗಿದ್ದ ಶಿವನನ್ನು ನೋಡಿ, "ದೇವದೇವಾ! ಹಾಲಾಹಲ ವಿಷವು ಮೂರು ಲೋಕಗಳನ್ನೂ ದಹಿಸಿಕೊಂಡು ಬರುತ್ತಿದೆ. ಆದರಿಂದ ನಮ್ಮನ್ನು ರಕ್ಷಿಸು. ಲೋಕಗಳಿಗೆಲ್ಲಾ ನೀನೇ ಈಶ್ವರನಾಗಿರುವಿ. ನಿನ್ನ ಪರಮ ಜ್ಯೋತಿಯ ಆದ್ಯಂತವನ್ನು ನೋಡಲು ಇಂದ್ರನಿಗೂ, ಬ್ರಹ್ಮನಿಗೂ, ವಿಷ್ಣುವಿಗೂ ಸಾಧ್ಯವಾಗುವಂತಹುದಲ್ಲ! ಆದ್ದರಿಂದ ವಿಷಮಯವಾಗುವ ಜಗತ್ತನ್ನು ಈಗ ನೀನೇ ಕಾಪಾಡಬೇಕಾಗಿದೆ" ಎಂದು ಮೊರೆಯಿಟ್ಟರು.

ಅವರ ದುಸ್ಥಿತಿಯನ್ನು ನೋಡಿ ಶಿವನು ಕನಿಕರಪಡುತ್ತ ಪಾರ್ವತಿಯನ್ನು ನೋಡಿ, "ಇವರೆಲ್ಲಾ ಕ್ಷೀರಸಾಗರವನ್ನು ಮಥಿಸುವುದರಿಂದ ಕಾಲಕೂಟ ವಿಷವು ಹುಟ್ಟಿಕೊಂಡು ಪ್ರಜೆಗಳಿಗೆಲ್ಲಾ ಎಂತಹ ಕಷ್ಟ ಬಂತೋ ನೋಡಿದೆಯಾ? ನಾನೀಗ ಆ ವಿಷವನ್ನು ಹೀರಿ ನುಂಗಿಬಿಡುವುದಾಗಿ ನಿಶ್ಚಯಿಸಿದ್ದೇನೆ" ಎಂದನು.

ಅದಕ್ಕೆ ಪಾರ್ವತಿ ಒಪ್ಪಿಗೆ ನೀಡಿದಳು.

ಆಗ ಶಿವನು ಲೋಕಗಳನ್ನೆಲ್ಲಾ ವ್ಯಾಪಿಸುವ ವಿಷವನ್ನೆಲ್ಲಾ ಬಾಚಿ ಒಂದಾಗಿ ಸೇರಿಸಿ ತನ್ನ ಬಾಯೊಳಗೆ ಹಾಕಿ ಒಳಗೆ ನುಂಗದೆ ಕಂಠದಲ್ಲೇ ನಿಲ್ಲಿಸಿಕೊಂಡನು. ಮಹೇಶ್ವರನ ಮೇಲೆ ಕೂಡಾ ಆ ವಿಷವು ತನ್ನ ಪ್ರಭಾವ ತೋರಿಸದೆ ಬಿಡಲಿಲ್ಲ. ಅವನ ಕಂಠವು ಕರಟಿ ಕಪ್ಪಗಾಯಿತು. ಅಂದಿನಿಂದ ಎಲ್ಲರ ಭಯವೂ ನಿವಾರಣೆಯಾಗಿ ಶಿವನಿಗೆ ನೀಲಕಂಠನೆಂಬ ಹೆಸರು ಬಂದಿತು.

ಶಿವನ ದಯೆಯಿಂದ ಕಾಲಕೂಟದ ಭಯವು ನಿವಾರಣೆಯಾದ ಮೇಲೆ ದೇವದಾನವರು ಮತ್ತೆ ಹಾಲಸಮುದ್ರವನ್ನು ಕಡೆಯತೊಡಗಿದರು. ಆಗ ಸಮುದ್ರದಿಂದ ಕಾಮಧೇನು ಹುಟ್ಟಿ ಎದ್ದು ಬಂದಿತು. ಅದನ್ನು ಯಜ್ಞಕಾರ್ಯಗಳಿಗಾಗಿ ಮುನಿಗಳು ತೆಗೆದುಕೊಂಡರು. ಆಮೇಲೆ ಉಚ್ಚೈಃಶ್ರವವೆಂಬ ಬಿಳೀ ಕುದುರೆ ಹುಟ್ಟಿತು. ಅದು ತನಗೆ ಬೇಕೆಂದು ಬಲಿ ಹೇಳಿದನು. ಇಂದ್ರನು ಅದು ತನಗೆ ಬೇಕೆಂದಾಗ



ನೋಡಲು ಬಂದು, "ನಾನು ನಿನ್ನ ಅವತಾರಗಳೆನ್ನೆಲ್ಲಾ ನೋಡಿದ್ದೇನೆ. ಈಗ ಮೋಹಿನಿಯ ಅವತಾರವೆತ್ತಿದೆಯಂತೆ. ಅದನ್ನು ನೋಡೋಣವೆಂದು ಕುತೂಹಲದಿಂದ ಬಂದೆ. ತೋರಿಸುವಿಯಾ ?" ಎಂದನು.

"ದೈತ್ಯರನ್ನು ಸಮ್ಮೋಹಿಸಲಿಕ್ಕಾಗಿ ಎತ್ತಿದ ಆ ರೂಪವನ್ನು ನೀವು ಕೂಡಾ ನೋಡಿದರೆ ನನಗೇನೂ ಆಕ್ಷೇಪವಿಲ್ಲ, ನೋಡಿರಿ" ಎಂದು ವಿಷ್ಣು ಅದೃಶ್ಯನಾಗಿ, ತುಸು ದೂರದಲ್ಲಿ ಮೋಹಿನಿಯ ರೂಪದಲ್ಲಿ ಚೆಂಡಿನೊಂದಿಗೆ ಆಡುವುದು ಕಾಣಿಸಿತು,

ಆ ಮೋಹಿನಿಯನ್ನು ನೋಡಿದ ಕೂಡಲೇ ಶಿವನು ತನ್ನೊಂದಿಗಿರುವ ಪಾರ್ವತಿಯನ್ನೂ, ಪ್ರಮಥ ಗಣಗಳನ್ನೂ ಮರೆತುಬಿಟ್ಟನು. ಎಲ್ಲರೂ ನೋಡುತ್ತಿದ್ದ ಹಾಗೆಯೇ ಶಿವನು ಮೋಹಿನಿಯ ಹಿಂದೆಯೇ ಹೋಗತೊಡಗಿದನು. ಅಷ್ಟರಲ್ಲಿ ಅವನಿಗೆ ಇದೆಲ್ಲಾ ವಿಷ್ಣುಮಾಯೆ ಎಂದು ನೆನಪಿಗೆ ಬಂತು, ವಿಷ್ಣು ಶಿವನ ಆತ್ಮನಿಷ್ಠೆಯನ್ನು ಮೆಚ್ಚಿ ಪ್ರಶಂಸೆ ಮಾಡಿದನು.

ಆಮೇಲೆ ಶಿವನು ವಿಷ್ಣುವಿನಿಂದ ಅಪ್ಪಣೆ ಪಡೆದು ಪಾರ್ವತಿಯೊಂದಿಗೆ ಕೈಲಾಸಕ್ಕೆ ಹಿಂದಿರುಗಿದನು.

**ಪೂ**ರ್ವ ಕಾಲದಲ್ಲಿ ಅಯೋಧ್ಯಾ ನಗರವನ್ನು ಬಾಹುವೆಂಬ ರಾಜನು ಪಾಲಿಸಿಕೊಂಡಿದ್ದನು. ಆಗ ಹೈಹಯನೆಂಬವನು ಇವನ ರಾಜ್ಯವ ಮೇಲೆ ದಾಳಿ ಮಾಡಿ ಇವನನ್ನು ರಾಜ್ಯದಿಂದ ಓಡಿಸಿಬಿಟ್ಟನು. ಬಾಹು ರಾಜನು ತನ್ನ ಹೆಂಡತಿಯರೊಂದಿಗೆ ಕಾಡಿಗೆ ಹೋದನು.

ಕಾಡಿನಲ್ಲಿರುವಾಗ ಬಾಹುವಿನ ಹೆಂಡತಿಯರಲ್ಲಿ ಒಬ್ಬಳು ಗರ್ಭಿಣಿಯಾದಳು. ಅಷ್ಟರಲ್ಲಿಯೇ ಬಾಹುವಿಗೆ ಸಾವು ಬಂದಿತು. ಗರ್ಭಿಣಿಯಾದ ಆವನ ಹೆಂಡತಿ ಗಂಡನೊಂದಿಗೆ ಸಹಗಮನ ಮಾಡಲು ನಿಶ್ಚಯಿಸಿದಳು. ಆಗ ಔರ್ವನೆಂಬ ಮುನಿ ಅವಳನ್ನು ತಡೆದು ನಿಲ್ಲಿಸಿ, ಅವಳಿಗೆ ಮಗನು ಹುಟ್ಟುವನೆಂತಲೂ ಹೇಳಿದನು.

ಇದು ತಿಳಿದು ಅವಳ ಸವತಿಯರು ಅವಳನ್ನು ಕೊಂದುಬಿಡಲು ಆಹಾರದಲ್ಲಿ ವಿಷ ಬೆರೆಸಿದರು. ಆ ವಿಷದೊಂದಿಗೇ ಅವಳಿಗೆ ಪುತ್ರನು ಹುಟ್ಟಿದನು. ಆದುದರಿಂದ ಆವನಿಗೆ ಸಗರ (ಗರಳದೊಂದಿಗೆ ಕೂಡಿದವನು) ಎಂದು ನಾಮಕರಣ ಮಾಡಲಾಯಿತು.

ಸಗರನು ಕಾಲಕ್ರಮದಲ್ಲಿ ಚಕ್ರವರ್ತಿಯಾಗಿ ಔರ್ವನ ಸಹಾಯದಿಂದ ಅನೇಕ ಅಶ್ವಮೇಧಗಳನ್ನು ಮಾಡಿದನು. ಅವನಿಗೆ ಸುಮತಿ, ಕೇಶಿನಿ ಎಂಬ ಇಬ್ಬರು ಹೆಂಡತಿಯರಿದ್ದರು. ಆದರೆ ಅವನಿಗೆ ಸಂತಾನವಾಗದೆ ಹೋಯಿತು. ಆದುದರಿಂದ ಅವನು ನಗರವನ್ನು ಬಿಟ್ಟು ಅಡವಿಗೆ ಹೋಗಿ ಔರ್ವನನ್ನು ಕಲೆತುಕೊಂಡು ತನ್ನ ಸಮಸ್ಯೆಯನ್ನು ಅವನೊಂದಿಗೆ ಹೇಳಿದನು.

ಔರ್ವನು ಸಗರನ ಸಂಗತಿಯನ್ನೆಲ್ಲಾ ಕೇಳಿ, ಅವನ ಹೆಂಡತಿಯರಿಗೆ ಸಂತಾನವಾಗುತ್ತದೆಂದೂ, ಅವನು ತನ್ನ ಹೆಂಡತಿಯರೊಂದಿಗೆ ಕೈಲಾಸಕ್ಕೆ ಹೋಗಿ ತಪಸ್ಸು ಮಾಡಬೇಕೆಂದೂ ಹೇಳಿದನು. ಸಗರನು ಪತ್ನಿಯರೊಂದಿಗೆ ಕೈಲಾಸಕ್ಕೆ ಹೋಗಿ ಶಿವನನ್ನು ಧ್ಯಾನಿಸುತ್ತ ತಪಸ್ಸು ಮಾಡಿದನು. ಕಡೆಗೆ ಶಿವನು ಸಗರನ ಮುಂದೆ ಪ್ರತ್ಯಕ್ಷನಾಗಿ ಸಂತಾನವಾಗುವಂತೆ ವರವನ್ನು ಕೊಟ್ಟನು.

ಸಗರನು ನಗರಕ್ಕೆ ಹಿಂದಿರುಗಿ ಬಂದ ಮೇಲೆ ಅವನ ಇಬ್ಬರು ಹೆಂಡತಿಯರೂ ಗರ್ಭವತಿಯರಾಗಿ ಇಬ್ಬರೂ ಪುತ್ರರನ್ನು ಹಡೆದರು. ಆದರೆ ಸುಮತಿಯ ಮಗನು ಪಿಂಡರೂಪನಾಗಿದ್ದನು. ಔರ್ವನು ಬಂದು ನಡೆದುದನ್ನು ನೋಡಿ ಸುಮತಿಗೆ ಹುಟ್ಟಿದ ಮಗನಲ್ಲಿ ಅರವತ್ತು ಸಾವಿರ ಮಂದಿ ಕುಮಾರರಿರುವಂತೆ ಹೇಳಿ, ಆ ಮಗುವನ್ನು ಅರುವತ್ತು ಸಾವಿರ ಪಿಂಡಗಳನ್ನಾಗಿ ಮಾಡಿಸಿ ಕುಂಡಗಳಲ್ಲಿ ಇಡಿಸಿದನು. ಆ ಕುಂಡಗಳಿಂದ ಅರುವತ್ತು ಸಾವಿರ ಮಂದಿ ಕುಮಾರರು ಹುಟ್ಟಿದರು.

ಕೇಶಿನಿಯ ಮಗನಾದ ಅಸಮಂಜಸನು ಮಹಾ ಭಯಂಕರವಾದ ಕಾರ್ಯಗಳನ್ನು ಮಾಡುವವನಾದನು. ಬಹಳ ಕ್ರೂರಕರ್ಮಿಯಾದನು. ಭಿಕ್ಷುಕರನ್ನೂ, ಮುದುಕರನ್ನೂ ಎತ್ತಿ ನದಿಗೆ ಬಿಸುಡುತ್ತಿದ್ದನು. ಅವನ ಪೀಡನೆಗಳನ್ನು ಸಹಿಸಲಾಗದೆ ಪ್ರಜೆಗಳು ಬಂದು ಸಗರನೊಂದಿಗೆ ಮೊರೆಯಿಟ್ಟರು. ಸಗರನು ಅಸಮಂಜಸನನ್ನು ನಗರದಿಂದ ಹೊರಗೆ ಹಾಕಿಸಿಬಿಟ್ಟನು.

ಅದಾದ ಮೇಲೆ ಸಗರನು ಅಶ್ವಮೇಧ ಯಾಗ ಮಾಡಲು ನಿಶ್ಚಯಿಸಿ, ಯಾಗಾಶ್ವವನ್ನು ದೇಶಗಳ ಮೇಲೆ ಹೋಗಲು ಬಿಟ್ಟು, ಅದರ ಹಿಂದೆ ತನ್ನ ಅರುವತ್ತು ಸಾವಿರ ಮಂದಿ ಕುಮಾರರೆಲ್ಲರನ್ನೂ ಕಳುಹಿಸಿಕೊಟ್ಟನು.

ಸಗರನಿಂದ ಹೊರಡಿಸಲ್ಪಟ್ಟ ಕುದುರೆ ಒಂದಾನೊಂದು ಸ್ಥಳದಲ್ಲಿ ತಿರುಗುತ್ತ ಅದು ಹೇಗೋ ಆಕಸ್ಮಿಕವಾಗಿ ಮಾಯವಾಗಿ ಹೋಯಿತು. ಸಗರ ಕುಮಾರರು ಅದನ್ನು ಹುಡುಕಿ ಹುಡುಕಿ ಬೇಸತ್ತರು. ಭೂಮಿಯಲ್ಲೆಲ್ಲಿಯೂ ಅದು ಕಾಣದೆ ಹೋದುದರಿಂದ, ನಗರಕ್ಕೆ ಹಿಂದಿರುಗಿ ಬಂದು, ಯಾಗಾಶ್ವವು ಮಾಯವಾದ ಸಮಾಚಾರವನ್ನು ತಂದೆಯೊಂದಿಗೆ ಹೇಳಿದರು.

ಸಗರನು ಅವರ ಮೇಲೆ ಅತ್ಯಂತ ಕೋಪದಿಂದ ಕಿಡಿಕಾರಿಸಿ, ಕುದುರೆಯಿಲ್ಲದೆ ನಗರದೊಳಗೆ ಕಾಲಿಡಕೂಡದೆಂದು ಶಾಸಿಸಿದನು. ಸಗರಕುಮಾರರು ಅತ್ಯಂತ ಹಟದಿಂದ ಮತ್ತೆ ಅಶ್ವವನ್ನು ಹುಡುಕಲು ಹೊರಟರು.





ದೂರ ಓಡಿಹೋಗಿ ಅಲ್ಲಿ ತಮ್ಮೊಳಗೆ ತಾವು ನನಗೆ ತನಗೆಂದು ತಕರಾರು ಮಾಡಿಕೊಳ್ಳತೊಡಗಿದರು.

ಅದನ್ನು ನೋಡಿ ದೇವತೆಗಳು ವಿಷ್ಣುವಿನೊಂದಿಗೆ ಮೊರೆಯಿಟ್ಟರು. "ಚಿಂತಿಸಬೇಡಿ. ಇದೋ ಈಗಲೇ ನಾನು ಮಾಯೋಪಾಯದಿಂದ ಅಮೃತವು ನಿಮಗೇ ದಕ್ಕುವಂತೆ ಮಾಡುತ್ತೇನೆ ನೋಡಿರಿ!" ಎಂದು ಅಭಯವಿತ್ತನು.

ಆಮೇಲೆ ವಿಷ್ಣು ಅತ್ಯಂತ ಆಕರ್ಷಣೆಯ ಸೌಂದರ್ಯವುಳ್ಳ ಮೋಹಿನಿಯ ರೂಪವನ್ನು ಧರಿಸಿ ದೈತ್ಯರ ಹತ್ತಿರ ಹೋದನು. ಅವರು ಆ ಮೋಹಿನಿಯನ್ನು ನೋಡಿ ಮೋಹದಿಂದ ಮಶಿಗೆಟ್ಟರು. "ನಿನಗೂ ಬೇಕೆ? ಈಗ ನಾವು ಈ ಅಮೃತಕ್ಕಾಗಿ ಮೊದಲು ಯಾರಿಗೆಂದು ತಗಾದೆ ಮಾಡಿಕೊಂಡಿದ್ದೇವೆ. ನೀನು ನ್ಯಾಯವಾಗಿ ನಮಗೆ ಇದನ್ನು ಹಂಚಿಕೊಡುವೆಯಾ? ನಿನಗೂ ಸ್ವಲ್ಪ ಇಟ್ಟುಕೋ" ಎಂದರು ದೈತ್ಯರು.

"ನಾನು ಮಾಡುವುದಕ್ಕೆ ಆಕ್ಷೇಪಣೆ ಹೇಳದೆ ಸುಮ್ಮನಿರುವಿರಾದರೆ ಹಂಚಿಕೊಡಲು ಅಡ್ಡಿ ಇಲ್ಲ" ಎಂದಳು ಮೋಹಿನಿ. ದಾನವರು ಅದಕ್ಕೆ ಒಪ್ಪಿದರು. ಅಮೃತಕಲಶ ಮೋಹಿನಿಯ ಕೈಗೆ ಸಿಕ್ಕಿತು.

ಮೋಹಿನಿ ದೇವತೆಗಳನ್ನೂ ದಾನವರನ್ನೂ ಬೇರೆ ಬೇರೆ ಪಂಕ್ತಿಗಳಲ್ಲಿ ಕೂಡಿಸಿ ದೇವತೆಗಳ ಪಂಕ್ತಿಗೆ ಅಮೃತವನ್ನು ಹಂಚತೊಡಗಿದಳು. ಅವಳ ಮಾತಿಗೆ ಕಟ್ಟುಬಿದ್ದ ದೈತ್ಯರು ಅಭ್ಯಂತರವೇನೂ ಹೇಳಲಿಲ್ಲ. ದೇವತೆಗಳೆಲ್ಲರೂ ಅಮೃತವನ್ನು ಕುಡಿದ ಮೇಲೆ ವಿಷ್ಣು ಮೋಹಿನೀ ರೂಪವನ್ನು ಉಪಸಂಹರಿಸಿಕೊಂಡನು.

ವಿಷ್ಣು ಮೋಹಿನಿಯ ರೂಪದಲ್ಲಿ ದೈತ್ಯರನ್ನು ಬೆಪ್ಪುಬಡಿಸಿ ಅಮೃತವನ್ನು ದೇವತೆಗಳಿಗೆ ಕೊಟ್ಟ ಸಂಗತಿಯನ್ನು ತಿಳಿದು ಶಿವನು ವೃಷಭ ವಾಹನದ ಮೇಲೆ ಪಾರ್ವತೀದೇವಿಯೊಂದಿಗೆ ವಿಷ್ಣುವನ್ನು

ವಿಷ್ಣು ಸುಮ್ಮನಿರುವಂತೆ ಸನ್ನೆಮಾಡಿ ಇಂದ್ರನ ಬಾಯಿ ಮುಚ್ಚಿಸಿದನು.

ಅದಾದ ಮೇಲೆ ಹಾಲ ಸಮುದ್ರದಿಂದ ಐರಾವತವೆಂಬ ಬಿಳೀ ಬಣ್ಣದ, ನಾಲ್ಕು ದಂತಗಳಿರುವ ಆನೆ ಹುಟ್ಟಿತು. ಅದರ ಬೆನ್ನಿಗೆ ಪಾರಿಜಾತವು ಎದ್ದಿತು. ಅದರ ಹಿಂದೆಯೇ ಅಪ್ಸರಸಿಯರು ಹುಟ್ಟಿದರು. ಆಮೇಲೆ ದೇದೀಪ್ಯಮಾನಳಾಗಿ ಬೆಳಗುವ ಲಕ್ಷ್ಮೀದೇವಿ ಉದ್ಭವಿಸಿ ಬಂದಳು. ಅವಳು ಸ್ವತಃ ಬಂದು ವಿಷ್ಣುವಿನ ವಕ್ಷಸ್ಥಳವನ್ನು ವರಿಸಿಕೊಂಡಳು. ಲಕ್ಷ್ಮಿಯೊಂದಿಗೆ ಹಾಲ ಸಮುದ್ರದೊಳಗಿನಿಂದ ಚಂದ್ರನು ಬೆಳಗುತ್ತಾ ಎದ್ದನು.

ಎಲ್ಲವೂ ಬಂದ ಮೇಲೆ ಹಾಲ ಸಮುದ್ರದೊಳಗಿನಿಂದ ಧನ್ವಂತರಿ ಅಮೃತಕಲಶವನ್ನು ಹಿಡಿದುಕೊಂಡು ಮೇಲೆ ಬಂದನು.

ಕೂಡಲೇ ದೈತ್ಯರು ಆತುರದಿಂದ ಅಮೃತಕಲಶವನ್ನು ಧನ್ವಂತರಿಯಿಂದ ಚಟಕ್ಕನೆ ಎಳೆದುಕೊಂಡು



ಇರಿಸಿಕೊಂಡಿರುವ ಪುಣ್ಯಾತ್ಮರು ಮಾಡುವ ಸ್ನಾನ ಗಳಿಂದ ನನ್ನಲ್ಲಿ ಸೇರುವ ಪಾಪಗಳೆಲ್ಲವೂ ಪರಿಹಾರ ವಾಗಿ ಹೋಗುತ್ತದೆ" ಎಂದನು ಭಗೀರಥ.

"ನೀನು ಚೆನ್ನಾಗಿ ಹೇಳಿದೆ. ನಿನ್ನ ಕೋರಿಕೆ ಯನ್ನು ನೆರವೇರಿಸುತ್ತೇನೆ. ನಾನು ಸ್ವರ್ಗದಿಂದ ಬೀಳುವಾಗ ನನ್ನನ್ನು ತಾಳಿಕೊಳ್ಳುವಂತೆ ಶಿವನನ್ನು ಒಪ್ಪಿಸುವುದು ನಿನ್ನ ಕೆಲಸ" ಎಂದು ಹೇಳಿ ಗಂಗಾ ದೇವಿ ಅಂತರ್ಧಾನಳಾದಳು.

ಭಗೀರಥನು ಮತ್ತೆ ಶಿವನನ್ನು ಕುರಿತು ತಪಸ್ಸು ಮಾಡಿ, ಆ ದೇವನನ್ನು ಸುಲಭವಾಗಿಯೇ ಪ್ರತ್ಯಕ್ಷ ಮಾಡಿಕೊಂಡನು. ಭಗೀರಥನ ಕೋರಿಕೆಯನ್ನು ಕೇಳಿ, ಶಿವನು ಅವನ ಅಪೇಕ್ಷೆಯನ್ನು ನಡೆಸಿಕೊಡಲು ಅಂಗೀಕರಿಸಿಕೊಂಡನು.

ಆಕಾಶದಿಂದ ಗಂಗೆ ನೆಟ್ಟಗೆ ಶಿವನ ತಲೆಯ ಮೇಲೆ ಬಿದ್ದಳು. ತರುವಾಯ ಶಿವನ ಜಡೆಗಳ ಸಂದಿನಿಂದ ಜಾರಿ, ಭೂಮಿಯ ಮೇಲೆ ಪ್ರವಹಿಸಲು ಹೊರಟಿದಳು. ಭಗೀರಥನು ವಾಯುವೇಗದ ರಥದ ಮೇಲೆ ಕುಳಿತು ದಾರಿ ತೋರಿಸಿಕೊಂಡು ಹೋಗು ತ್ತಿದ್ದನು. ಗಂಗೆ ಅವನ ಹಿಂದೆಯೇ ಸಾಗುತ್ತ ಪಾತಾಳಕ್ಕಿಳಿದು, ಸಗರ ಪುತ್ರರ ಭಸ್ಮರಾಶಿಯ ಮೇಲೆ ಪ್ರವಹಿಸಿ ಸಮುದ್ರವಾಗಿ ನಿಂತಳು. ಅದರ ರಿಂದಲೇ ಸಮುದ್ರಕ್ಕೆ ಸಾಗರವೆಂದು ಹೆಸರು ಬಂದಿತು.

ಸ್ವಾಯಂಭುವ ಮನುವಿನ ಕಾಲದಲ್ಲಿ ಒಂದು ಸಾರಿ ಅರುವತ್ತು ಸಂವತ್ಸರಗಳವರೆಗೆ ಮಳೆಯೇ ಬಾರದೆ ಅತಿ ಭಯಂಕರವಾದ ಪರಿಸ್ಥಿತಿ ಏರ್ಪಟ್ಟಿತು. ವಿಪರೀತವಾದ ಬರಕ್ಷಾಮದಿಂದ ಜಂತುಕ್ಷಯವಾಗಿ ಪ್ರಾಣಿ ಕೋಟಿಗಳ ಜೀವಿತವೆಲ್ಲಾ ಅಸ್ತವ್ಯಸ್ತವಾಗಿ ಹೋಯಿತು. ಅದನ್ನು ನೋಡಿ ಬ್ರಹ್ಮನು ಪ್ರಪಂಚದ ಸೃಷ್ಟಿ ಸರಿಯಾಗಿ ನಡೆಯಲು ಬಲ್ಲವನನ್ನು ರಾಜ ನನ್ನಾಗಿ ಮಾಡಬೇಕೆಂದು ಸಂಕಲ್ಪಿಸಿದನು. ಆಗ ಅವನಿಗೆ ಮನು ವಂಶದಲ್ಲಿ ರಿಪುಂಜಯನೆಂಬ ಸಕಲ ಸದ್ಗುಣ ಸಂಪನ್ನನೊಬ್ಬನು ಕಂಡುಬಂದನು. ಬ್ರಹ್ಮನು ರಿಪುಂಜಯನನ್ನು ನೋಡಿ, "ಅಪ್ಪಾ, ನಿನಗೆ ಪ್ರಪಂಚಾಧಿಪತ್ಯವನ್ನು ಕೊಡುತ್ತೇನೆ. ನೀನು ದಿವೋದಾಸನೆಂಬ ಹೆಸರಿನಿಂದ ಪ್ರಪಂಚವನ್ನು ಸಮರ್ಥತೆಯಿಂದ ಪಾಲಿಸಿರು. ವಾಸುಕಿಯ ಕುಮಾರಿಯಾದ ಅನಂಗಮೋಹಿನಿ ನಿನಗೆ ಪತ್ನಿ ಯಾಗುತ್ತಾಳೆ" ಎಂದನು.

ಬ್ರಹ್ಮನ ಮಾತು ಕೇಳಿ ರಿಪುಂಜಯನು, "ಓ ತಾತಯ್ಯಾ, ನನಗೊಂದು ವರವನ್ನು ಅನು ಗ್ರಹಿಸಿದರೆ ಮಾತ್ರ ನೀವು ಹೇಳಿದಂತೆ ಭೂಭಾರ ವನ್ನು ವಹಿಸಿಕೊಳ್ಳುತ್ತೇನೆ. ಆ ವರವು ಏನೆಂದರೆ, ಭೂಮಿಯ ಮೇಲೆ ಕೆಳಗಿನ ಲೋಕದವರಾಗಲೀ, ಮೇಲಿನ ಲೋಕದವರಾಗಲೀ ಯಾರೂ ಇರ ಕೂಡದು" ಎಂದನು. ಅದನ್ನು ಕೇಳಿಕೊಂಡಂತೆಯೇ ಬ್ರಹ್ಮನು ಒಪ್ಪಿಕೊಂಡನು. ಈ ಸಂಗತಿಯನ್ನು



# ಶಿವಪುರಾಣ

ದಿವೋದಾಸನ ಬಳಿಗೆ ಹೋದ ಬ್ರಹ್ಮನು ಕೂಡಾ ಹಿಂದಿರುಗಿ ಬಾರದಿರುವುದನ್ನು ನೋಡಿ ಶಿವನು ಪ್ರಮಥ ಗಣಗಳನ್ನು ಕಾಶಿಗೆ ಕಳುಹಿಸಿದನು. ಕಾಶೀ ಕ್ಷೇತ್ರದ ಮಹತ್ವದಲ್ಲಿ ಅದೇನು ವಿಶೇಷವೋ! ಪ್ರಮಥರು ಕಾಶೀಕ್ಷೇತ್ರವನ್ನು ಸೇರಿದ ಕೂಡಲೇ ಬಂದ ಕಾರ್ಯವನ್ನು ಪೂರ್ತಿ ಮರೆತುಬಿಟ್ಟರು. ಅವರಲ್ಲಿ ಕಪರ್ದಿ ಎಂಬವನು ಕಪರ್ದೀಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದನು.

ಮಂದರಗಿರಿಯ ಮೇಲಿರುವ ಶಿವನಿಗೆ ಕಾಶಿಯಲ್ಲಿ ಏನು ನಡೆಯುತ್ತಿದೆ ಎಂಬುದೊಂದೂ ತಿಳಿಯಲಿಲ್ಲ. ಆಗ ಶಿವನು ವಿನಾಯಕನನ್ನು ಕರೆದು, ಅವನಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ ಕಾಶೀ ನಗರಕ್ಕೆ ಕಳುಹಿಸಿಕೊಟ್ಟನು.

ವಿನಾಯಕನು ಕಾಶೀ ನಗರಕ್ಕೆ ಹೋಗಿ ಅಲ್ಲಿ ಅನೇಕ ಉತ್ಪಾತಗಳಾಗುವಂತೆ ಮಾಡಿದನು. ಆಮೇಲೆ ವಿನಾಯಕನು ದಿವೋದಾಸನ ಭವನದೊಳಗೆ ಪ್ರವೇಶ ಮಾಡಿದನು. ರಾಜನು ಅವನೊಂದಿಗೆ ಅನೇಕ ಪ್ರಶ್ನೆಗಳನ್ನು ಕೇಳಿದನು. ಎಲ್ಲವಕ್ಕೂ ವಿನಾಯಕನು ಸರಿಯಾದ ಉತ್ತರ ಕೊಟ್ಟನು. ಹೀಗಾಗಿ ವಿನಾಯಕನು ರಾಜಪುರೋಹಿತರಲ್ಲಿ ಒಬ್ಬನಾಗಿ ಸೇರಿಹೋದನು.

ಒಂದು ದಿನ ರಾಜನು ಢುಂಢಿ ಭಟ್ಟಾರಕನೊಂದಿಗೆ, "ಕಾಶೀ ನಗರದಲ್ಲಿ ಹೀಗೆ ಉತ್ಪಾತಗಳಾಗಲು ಕಾರಣವೇನು ?" ಎಂದು ಕೇಳಿದನು.

"ರಾಜಾ, ಸ್ವಲ್ಪಕಾಲದವರೆಗೆ ನೀನು ಕಾಶೀ ನಗರವನ್ನು ಬಿಟ್ಟು ದೂರ ಹೋಗಿರುವುದು ಒಳ್ಳೆಯದೆಂದು ನನಗೆ ಅನಿಸುತ್ತದೆ. ಇನ್ನು ಹದಿನೆಂಟು ದಿನಗಳಲ್ಲಿ ಉತ್ತರ ದೇಶದಿಂದ ಒಬ್ಬ ಬ್ರಾಹ್ಮಣನು ಬರುತ್ತಾನೆ. ಅವನೇ ನಿನಗೆ ತಕ್ಕುದಾದ ಹಿತೋಪದೇಶ ಕೂಡಾ ಮಾಡುತ್ತಾನೆ" ಎಂದನು ಢುಂಢಿ.

ತರುವಾಯ ಶಿವನು ವಿಷ್ಣುಮೂರ್ತಿಯನ್ನು ಕಾಶೀ ನಗರಕ್ಕೆ ಕಳುಹಿಸಿದನು. ವಿಷ್ಣು ಬುದ್ಧನ ರೂಪದಲ್ಲಿ ಬಂದು ಕಾಶಿಯ ಪೌರರಿಗೆ ನಾಸ್ತಿಕ ಮತವನ್ನೂ ಬೌದ್ಧ, ಜೈನ ಧರ್ಮಗಳನ್ನೂ



ಬೋಧಿಸಿ, ಅವರ ಧರ್ಮಚಿಂತನೆಯನ್ನು ತೊಲಗಿಸಿದನು. ಅಷ್ಟಾದ ಮೇಲೆ ವಿಷ್ಣು ಬ್ರಾಹ್ಮಣ ವೇಷಧರಿಸಿ ದಿವೋದಾಸನ ಬಳಿಗೆ ಹೋಗಿ ಅವನನ್ನು ಆಶೀರ್ವಾದ ಮಾಡಿದನು.

ದಿವೋದಾಸನು ಆ ಬ್ರಾಹ್ಮಣನೊಂದಿಗೆ, "ಅಯ್ಯಾ, ದೇವತೆಗಳು ನನ್ನನ್ನು ಬಗೆ ಬಗೆಯಾಗಿ ಪೀಡಿಸುತ್ತಿದ್ದಾರೆ. ಸಾಕಾಗಿ ಹೋಯಿತು. ನಾನು ಕೂಡಾ ಬಹಳ ಕಾಲದಿಂದ ರಾಜ್ಯಭಾರ ನಡೆಸುತ್ತ ಮುದುಕನಾಗಿ ಹೋಗಿದ್ದೇನೆ. ನನಗೆ ಮೋಕ್ಷವು ಹೇಗೆ ಬರುತ್ತದೆ? ನಿಮಗೆ ಗೊತ್ತಿದ್ದರೆ ಹೇಳಬೇಕು" ಎಂದು ಕೇಳಿಕೊಂಡನು.

"ರಾಜಾ, ಕಾಶೀ ನಗರದಲ್ಲಿ ಲಿಂಗ ಪ್ರತಿಷ್ಠೆ ಮಾಡು. ಆ ಪುಣ್ಯ ಕಾರ್ಯದ ಪ್ರಭಾವದಿಂದ ನೀನು ಶರೀರದೊಂದಿಗೆ ಕೈಲಾಸಕ್ಕೆ ಹೋಗಿ ಸೇರುವಿ" ಎಂದನು ಬ್ರಾಹ್ಮಣ ರೂಪದ ವಿಷ್ಣು. ಆದರಂತೆ ದಿವೋದಾಸನು ತನ್ನ ಕುಮಾರನಾದ ಸಮರಂಜಯನಿಗೆ ಪಟ್ಟಗಟ್ಟಿ, ದೊಡ್ಡದೊಂದು ಗುಡಿಯನ್ನು ಕಟ್ಟಿಸಿದನು. ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಮುಗಿಸಿದನು. ಆಮೇಲೆ ತನಗಾಗಿ ಬಂದ ದೇವಲೋಕದ ವಿಮಾನದಲ್ಲಿ ಏರಿಕೊಂಡು ಮರ್ತ್ಯ ಶರೀರದೊಂದಿಗೇ ಕೈಲಾಸಕ್ಕೆ ಹೋಗಿ ಸೇರಿದನು. ಕಾಶಿಯನ್ನು ಬಿಟ್ಟುಹೋದ ದೇವತೆಗಳೆಲ್ಲರೂ ಮತ್ತೆ ಬಂದು ಸೇರಿದರು. ಶಿವನು ನಂದಿ ವಾಹನದ ಮೇಲೆ ತನ್ನ ಗಣಗಳ ಪರಿವಾರದೊಂದಿಗೆ ಕಾಶೀ ನಗರಕ್ಕೆ ಬಂದು ಸೇರಿಕೊಂಡು ಪರಮ ತೃಪ್ತನಾದನು.

ವಿಶ್ವನಾಥ ವಿಶಾಲಾಕ್ಷಿಯರು ಒಂದಾಗಿ ಸೇರಿಕೊಂಡಿರುವ ಕಾಶೀ ನಗರದಲ್ಲಿ ಸ್ವಲ್ಪಕಾಲ ವಾಸ ಮಾಡಬೇಕೆಂಬ ಕೋರಿಕೆಯಿಂದ ವೇದವ್ಯಾಸನು ತನ್ನ ಶಿಷ್ಯ ಗಣಗಳೊಂದಿಗೆ ಕೂಡಿ ಕಾಶಿಗೆ ಬಂದನು.

ಆ ಮಹಾನುಭಾವನ ಶಿಷ್ಯರಲ್ಲಿ ವೈಶಂಪಾಯನ, ಜೈಮಿನಿ, ಪೈಲ, ಸುಮಂತ ಮೊದಲಾದ ಮಹಾ ಮಹಿಮೆಗಳುಳ್ಳ ಅನೇಕರಿದ್ದರು.

ಅವರು ಉದಯ ಕಾಲದಲ್ಲಿ ತಮ್ಮ ಕಾಲಕೃತ್ಯಗಳನ್ನು ತೀರಿಸಿಕೊಂಡು, ಗಂಗೆಯಲ್ಲಿ ಸ್ನಾನಮಾಡಿ, ಗಾಯತ್ರಿ ಜಪಿಸಿ, ಅಗ್ನಿಕಾರ್ಯ ತೀರಿಸಿದ ಮೇಲೆ ಊರೊಳಗೆ ಭಿಕ್ಷಾಟನೆ ಮಾಡಲು ಒಬ್ಬೊಬ್ಬರು ಒಂದೊಂದು ದಾರಿ ಹಿಡಿದು ಹೊರಟರು.

ಆ ಸಮಯದಲ್ಲಿ ವಿಶ್ವೇಶ್ವರನು ವಿಶಾಲಾಕ್ಷಿಯೊಂದಿಗೆ, "ವ್ಯಾಸನ ಮನಸ್ಸು ಹೇಗಿರುವುದೆಂದು ನೋಡೋಣ. ಅವನಿಗೂ, ಅವನ ಶಿಷ್ಯರಿಗೂ ಭಿಕ್ಷೆ ಸಿಗದ ಹಾಗೆ ಮಾಡಿಬಿಡು" ಎಂದನು.

ಆದರಂತೆ ವಿಶಾಲಾಕ್ಷಿ ಕಾಶೀ ನಗರದ ಗೃಹಿಣಿಯರಿಗೆಲ್ಲಾ ಭಿಕ್ಷೆ ನೀಡುವ ಬುದ್ಧಿ ಬಾರದಂತೆ ಮಾಡಿದಳು. ವ್ಯಾಸನು "ಭಿಕ್ಷಾಂದೇಹಿ" ಎಂದು ಮನೆ ಮನೆಗಳಿಗೆ ತಿರುಗುತ್ತಿರಲು, ಗೃಹಿಣಿಯರು, "ಇನ್ನೂ ಅಡಿಗೆಯಾಗಿಲ್ಲವಪ್ಪಾ", "ಸಾಮಾನು



ಬರಲಿಲ್ಲ". "ಆಮೇಲೆ ಬಾ". "ಮುಂದಕ್ಕೆ ಹೋಗು". "ಈ ದಿನ ನಮ್ಮಲ್ಲಿ ಆಬ್ದಿಕ" ಎಂದು ಹೇಳತೊಡಗಿದರು.

ವ್ಯಾಸನಿಗೆ ಆದ ಅನುಭವವೇ ಅವನ ಶಿಷ್ಯರಿಗೂ ಆಯಿತು. ಹೊತ್ತು ಮಾಲುವವರೆಗೂ ಊರೆಲ್ಲಾ ತಿರುಗಿ ತಿರುಗಿ ಹಸಿವೆಯ ಹೊಟ್ಟೆಯಲ್ಲೇ ಎಲ್ಲರೂ ಮಠಕ್ಕೆ ಹಿಂದಿರುಗಿದರು.

"ನನಗೆ ಎಲ್ಲಿಯೂ ಒಂದಗಳು ಸಿಗಲಿಲ್ಲ. ನಿಮಗೇನಾದರೂ ಭಿಕ್ಷೆ ದೊರಕಿತೇನು?" ಎಂದು ವ್ಯಾಸನು ತನ್ನ ಶಿಷ್ಯರನ್ನು ಕೇಳಿದನು. ಅವರೆಲ್ಲರೂ ದೊರೆಯಲಿಲ್ಲವೆಂದರು.

"ಬೆಳಗ್ಗೆ ಎದ್ದು ಯಾವ ಪಾಪಾತ್ಮನ ಮುಖ ನೋಡಿದೆವೋ!" ಎಂದನು ವ್ಯಾಸ.

ಹೀಗೆಯೇ ಒಂದೆರಡಲ್ಲ, ಏಳು ದಿನಗಳವರೆಗೆ ನಡೆಯಿತು. ಹಸಿವೆ ತಡೆದುಕೊಳ್ಳುವ ಅಭ್ಯಾಸವಿದ್ದರಾದರೂ, ಅದಕ್ಕೊಂದು ಮಿತಿಯಿದೆಯಷ್ಟೆ?

ಎಂಟನೇ ದಿನ ಬೆಳಗಾಯಿತು. ಮತ್ತೆ ನಿತ್ಯಕರ್ಮಗಳನ್ನು ತೀರಿಸಿಕೊಂಡು, ಕಾಶಿಯೊಳಗಿರುವ ಎಲ್ಲಾ ದೇವತೆಗಳಿಗೂ ಮನಸ್ಸಿನಲ್ಲೇ ವಂದನೆಮಾಡಿ, ವ್ಯಾಸನೂ ಅವನ ಶಿಷ್ಯರೂ ತಲಾ ಒಂದೊಂದು ದಾರಿಯಲ್ಲಿ ಭಿಕ್ಷಾಟನೆಗೆ ಹೊರಟರು.

ವ್ಯಾಸನಿಗೆ ಒಂದು ಮನೆಯಲ್ಲೂ ಭಿಕ್ಷೆ ದೊರಕಲಿಲ್ಲ. ಆಗ ಅವನಿಗೆ ತಾಳಲಾಗದಷ್ಟು ಕೋಪಾವೇಶ ಉಕ್ಕಿಕೊಂಡು ಬಂತು. ಹಣೆಯ ಮೇಲೆ ಬೆವರು ಒಸರಿತು. ಕೈಕಾಲುಗಳು ನಡುಗಿದುವು. ಅವನು ನಡುಬೀದಿಯಲ್ಲಿ ಭಿಕ್ಷಾಪಾತ್ರವನ್ನು ನೆಲಕ್ಕೆ ಅಪ್ಪಳಿಸಿ ಒಡೆದುಹಾಕಿ, ಕಾಶಿಯಲ್ಲಿ ಮೂರು ತಲೆಮಾರುಗಳವರೆಗೆ ವಿದ್ಯೆಯೂ, ಧನವೂ, ಭಕ್ತಿಯೂ ಇಲ್ಲದೆ ಹೋಗಲೆಂದು ಶಾಪ ಕೊಡಲಿಕ್ಕಾಗಿ ಕಮಂಡಲುವಿನ ಜಲವನ್ನು ಅಂಗೈಗೆ ಬಗ್ಗಿಸಿಕೊಳ್ಳಲು ನೋಡುವಾಗ, ಅದೇನು ವಿಚಿತ್ರವೋ, ನಡುಗುವ ಕೈ ಮೇಲಕ್ಕೆ ಏಳಲೇ ಇಲ್ಲ.

ಅಷ್ಟರಲ್ಲಿ ಆ ಬೀದಿಯಲ್ಲಿರುವ ಒಂದು ಮನೆಯ ಬಾಗಿಲು ತೆರೆದುಕೊಂಡು ಐವತ್ತು ವಯಸ್ಸಿನ ಸ್ತ್ರೀಯೊಬ್ಬಳು ಸರ್ವಾಭರಣಭೂಷಿತೆಯಾಗಿ ಹೊರಗೆ ಬಂದು, ವ್ಯಾಸನನ್ನು ನೋಡಿ, "ಅಯ್ಯಾ, ಬ್ರಾಹ್ಮಣಾ! ಶಾಂತನಾಗು! ಶಾಪ ಬೇಡ! ಸ್ವಲ್ಪ ಇಲ್ಲಿಗೆ ಬಾ!" ಎಂದು ಕರೆದಳು ಶಾಂತಸ್ವರದಿಂದ.

ವ್ಯಾಸನು ಮಹದಾನಂದದಿಂದ, ಆ ಸ್ತ್ರೀ ಯಾರು, ಯಾವ ಕುಲ ಎಂಬುದೊಂದೂ ತಿಳಿದುಕೊಳ್ಳದೆಯೇ ಅವಳಿಗೆ ನಮಸ್ಕಾರ ಮಾಡಿದನು. ಆಗ ಅವನ ಕೈ ಜೋಡಿಕೊಂಡಿತು. ಅವನು ಹತ್ತಿರ ಹೋದ ಕೂಡಲೇ ಅವಳು, "ಅಲ್ಪ ಭಿಕ್ಷೆ ದೊರಕದಿರುವ ಮಾತ್ರಕ್ಕೆ ಕಾಶೀ ನಗರಕ್ಕೆ ಶಾಪ ಕೊಡುವಿಯಾ? ನಿನ್ನ ಮನಶ್ಶುದ್ಧಿ ಎಷ್ಟರಮಟ್ಟಿನದೆಂದು ತಿಳಿಯಲಿಕ್ಕಾಗಿ ವಿಶ್ವನಾಥನು ಹೀಗೆ ಮಾಡಿದನೇ



ಹೊರತು ಕಾಶೀ ನಗರದಲ್ಲಿ ಹೊಟ್ಟೆಗೆ ಕಷ್ಟ ಬರುವುದುಂಟೆ? ಮಧ್ಯಾಹ್ನದ ಅತಿಥಿ ವೇಳೆ ಯಾವಾಗ ಬರುವುದೋ ಎಂದು ಅನ್ನಪೂರ್ಣಾದೇವಿ ಅಭ್ಯಾಗತರಿಗೆ ಬಂಗಾರದ ಸೌಟಿನಿಂದ ಅಮೃತಪಾಯಸ ಬಡಿಸುವಳೆಂದು ನೀನು ಕೇಳಲಿಲ್ಲವೇನು? ಏಳು ದಿನ ಉಪವಾಸವಿದ್ದ ಮಾತ್ರಕ್ಕೆ ಧೀರತ್ವವನ್ನು ಕಳೆದುಕೊಂಡು ಶಿವನ ಎರಡನೇ ಪತ್ನಿಯಂತಹ ಕಾಶಿಯನ್ನು ಸರ್ವನಾಶ ಮಾಡಲು ನೋಡುವಿಯಲ್ಲಾ! ಹಸಿವೆಯೆಂಬುದು ಎಂತಹ ಘೋರವನ್ನಾದರೂ ಮಾಡಿಸುತ್ತದೆಂಬ ಮಾತು ನಿರೂಪಿಸಿಬಿಟ್ಟೆ! ಭಿಕ್ಷೆ ಹಾಕುತ್ತೇನೆ ಬಾ" ಎಂದಳು.

ಆ ಮಾತು ಕೇಳಿ ವ್ಯಾಸನು, "ಅಮ್ಮಾ, ಇಷ್ಟು ದಿನಗಳ ಮೇಲೆ ಎಂತಹ ಸವಿನುಡಿಗಳನ್ನು ಕಿವಿಗೆ ಹಾಕಿದಿ! ಭಿಕ್ಷೆಗೆ ನನ್ನೊಬ್ಬನನ್ನೇ ಕರೆಯುವೆಯಾ, ಅಲ್ಲ ಹಸಿವೆಯಲ್ಲಿರುವ ನನ್ನ ಶಿಷ್ಯರನ್ನು ಕೂಡಾ ಕರೆದುಕೊಂಡು ಬಾ ಅನ್ನುವಿಯಾ? ಎಲ್ಲರದೂ ಪ್ರಾಣಗಳು ತಾನೇ? ನಮ್ಮೆಲ್ಲರಿಗೂ ನೀನು ನಿನಗೆ ತೋರುವ ಭಿಕ್ಷೆ ನೀಡಿದರೆ ಎಲ್ಲರೂ ಹಂಚಿಕೊಳ್ಳುತ್ತೇವಮ್ಮಾ" ಎಂದನು.

ಆ ಮಾತು ಕೇಳಿ ಅವಳು ಮುಗುಳು ನಗುವಿನೊಂದಿಗೆ, "ಅಪ್ಪಾ, ನೀವುಗಳೆಲ್ಲಾ ಮಧ್ಯಾಹ್ನದ ಪೂಜೆಗಳನ್ನು ಗಂಗಾ ತೀರದಲ್ಲಿ ಮುಗಿಸಿ ಎಲ್ಲರೂ ಸೇರಿಯೇ ಬನ್ನಿರಿ. ಎಲ್ಲರಿಗೂ ಭೋಜನ ಬಡಿಸುವೆನು" ಎಂದಳು.

ವ್ಯಾಸನು ಅಲ್ಲಿಂದ ಹಿಂದಿರುಗಿ ತನ್ನ ಮುನ್ನೂರು ಮಂದಿ ಶಿಷ್ಯರೊಂದಿಗೆ ಗಂಗೆಗೆ ಹೋಗಿ, ಮಾಧ್ಯಾಹ್ನಿಕಗಳನ್ನು ಮುಗಿಸಿಕೊಂಡು ಆ ಮನೆಗೆ ಬಂದು ಸೇರಿದನು. ಆ ಹೆಂಗುಸು ಅವರನ್ನೆಲ್ಲಾ ಕರೆದೊಯ್ದು ಭೋಜನ ಶಾಲೆಯಲ್ಲಿ ಪೀಠಗಳ ಮೇಲೆ ಕುಳ್ಳಿರಿಸಿದಳು. ಎಲ್ಲರ ಮುಂದೆ ದೊಡ್ಡ ದೊಡ್ಡ ಬಾಳೆಯೆಲೆಗಳನ್ನು ಹಾಕಿದಳು. ವೃದ್ಧೆಳು ಎಲ್ಲರಿಗೂ ಅಕ್ಷತೆ ತಳಿದು ಧೂಪಾರತಿ ಎತ್ತಿ ಪಂಕ್ತಿಗಳ ನಡುವಿನಲ್ಲಿ ನಿಂತು, "ಅಪ್ಪಗಳಿರಾ, ಎಲ್ಲರೂ ಆಪೋಶನ ತೆಗೆದುಕೊಂಡು ಸಾವಕಾಶವಾಗಿ ಭೋಜನ ಮಾಡಬೇಕು. ಕಾಶೀ ವಿಶ್ವನಾಥನಿಗೆ ಪ್ರೀತಿಯಾಗುವಂತೆ ಮಾಡಿರಿ!" ಎಂದು ಕೈ ಮುಗಿದಳು.

ವ್ಯಾಸನೂ, ಅವನ ಶಿಷ್ಯರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಬಾಳೆಯೆಲೆಯಲ್ಲಿ ಯಾವ ಪದಾರ್ಥಗಳೂ ಕಾಣಲಿಲ್ಲ. ಕಡೇ ಪಕ್ಷ ಅಡಿಗೆಯ ವಾಸನೆಯೇ ಸುಳಿಯಲಿಲ್ಲ.

"ಈ ಮುದಿ ಹೆಂಗುಸು ಸುಳ್ಳಿನ ಊಟ ಬಡಿಸುವಳು. ಈ ದಿನ ಕೂಡಾ ನಮಗೆ ಉಪವಾಸವೇ! ಇದೊಂದು ವಿಚಿತ್ರ ಉಪವಾಸ!" ಎಂದು ಅವರೆಲ್ಲ ಆಡುಕೊಂಡರು.

ಅವರು ಹೀಗೆ ಆಡುಕೊಳ್ಳುತ್ತಿರುವಾಗಲೇ ಸ್ತ್ರೀಯರು ಬಂದು ಎಲ್ಲರಿಗೂ ಆಪೋಶನಕ್ಕೆ ತೀರ್ಥ ಕೊಡತೊಡಗಿದರು.

" ಅಪ್ಪಗಳಿರಾ ! ಬಹಳ ಹೊತ್ತಾಗಿ ಹೋಯಿತು. ಇನ್ನು ಭೋಜನಕ್ಕೆ ಉಪಕ್ರಮಿಸಿರಿ " ಎಂದಳು ವೃದ್ಧಸ್ತ್ರೀ ಎಲ್ಲರನ್ನೂ ನೋಡಿ.

ಅವರೆಲ್ಲ ಆಪೋಶನದ ತೀರ್ಥ ಕುಡಿದ ಮರು ಕ್ಷಣದಲ್ಲಿ ಎಲ್ಲರ ಎಲೆಗಳಲ್ಲಿಯೂ ಪಂಚಭಕ್ಷ್ಯ ಪರಮಾನ್ನಗಳು ಗಮಗಮಿಸಿಕೊಂಡು ಪ್ರತ್ಯಕ್ಷವಾಗಿದ್ದುವು. ಯಾರು ಯಾರಿಗೆ ಯಾವ ಯಾವ ಪದಾರ್ಥಗಳು ಇಷ್ಟವೋ ಅವೆಲ್ಲಾ ಅವರವರ ಎಲೆಗಳಲ್ಲಿದ್ದುವು.

" ಈ ವೃದ್ಧ ಸ್ತ್ರೀ ಸಾಕ್ಷಾತ್ ಅನ್ನಪೂರ್ಣಾ ದೇವಿಯೇ ಆಗಿರಬೇಕು " ಎಂದುಕೊಂಡು ಎಲ್ಲರೂ ಆನಂದದಿಂದ ಭೋಜನ ಮಾಡಿದರು.

ಎಲ್ಲರ ಭೋಜನವಾಗಿ ಎದ್ದು ಕೈ ತೊಳೆದ ಮೇಲೆ ವೃದ್ಧ ಸ್ತ್ರೀ ಅವರೆಲ್ಲರಿಗೂ ವಿಶ್ರಾಂತಿ ತೆಗೆದುಕೊಳ್ಳುವ ಜಾಗವನ್ನು ತೋರಿಸಿದಳು.

ಸ್ವಲ್ಪಹೊತ್ತಿನ ಮೇಲೆ ವಿಶ್ವನಾಥನು ಪಾರ್ವತೀ ಸಮೇತನಾಗಿ ವ್ಯಾಸನು ತನ್ನ ಶಿಷ್ಯರೊಂದಿಗೆ ವಿಶ್ರಮಿಸಿರುವಲ್ಲಿಗೆ ಬಂದನು. ಪಾರ್ವತಿಯ ಮುಖವು ಬಹಳ ಪ್ರಶಾಂತವಾಗಿದ್ದಿತು.

ಆದರೆ ಶಿವನ ಮುಖದಲ್ಲಿ ಕೋಪವು ತಾಂಡವಿಸಿಕೊಂಡಿರುವಂತೆ ಕಂಡಿತು. ಪರಿಣಾಮ ಏನಾಗುವುದೋ ? ಹೀಗೆ ಶಿವ ಪಾರ್ವತಿಯರನ್ನು ನೋಡಿದ ಕೂಡಲೇ ಎಲ್ಲರೂ ಒಮ್ಮೆಗೇ ಎದ್ದು ಪ್ರಣಾಮ ಮಾಡಿ ಕೈ ಜೋಡಿಸಿಕೊಂಡು ನಿಂತರು.

ಶಿವನು ಪಾರ್ವತೀ ಸಹಿತನಾಗಿ ಒಂದು ವೇದಿಕೆಯ ಮೇಲೆ ಕುಳಿತು, ವ್ಯಾಸನ ಮುಖವನ್ನು ಕೋಪದ ಕಣ್ಣಿನಿಂದ ನೋಡುತ್ತ, " ಎಲೈ ದುಷ್ಟ ಬುದ್ಧಿಯವನೇ ! ಮಹಾ ಭಾರತ ಬರೆದ ಶುಂಠಾ ! ಅಹಂಕಾರದಿಂದ ನನ್ನ ಪತ್ನಿಯಂತಹ ಈ ಕಾಶೀ ನಗರವನ್ನು ಶಾಪಭ್ರಷ್ಟ ಮಾಡಲು ನೋಡುವಿಯೇನು ! ನೀನು ಕಾಶಿಯೊಳಗೆ ಅಡಿ ಇಟ್ಟದ್ದೇ ದೊಡ್ಡ ದ್ರೋಹ ! ನೀನೂ ನಿನ್ನ ಶಿಷ್ಯರೂ ಈಗಲೇ ನಮ್ಮ ರಾಜ್ಯದ ಮೇರೆ ದಾಟಿ ಹೋಗಿಬಿಡಿರಿ ! " ಎಂದು ಗುಡುಗಿದನು.

ಆಗ ಅವನೊಂದಿಗಿದ್ದ ಪಾರ್ವತಿ ವ್ಯಾಸನನ್ನು ನೋಡಿ, " ಅಪ್ಪಾ ವ್ಯಾಸಾ ! ನೀನು ಬೇರೆಲ್ಲಿಗೂ ಹೋಗಬೇಡ. ಸೀದಾ ದಕ್ಷಾರಾಮಕ್ಕೆ ಹೋಗಿ ಭೀಮೇಶ್ವರನ ಸೇವೆಮಾಡಿ ಪೂಜಿಸು. ನಿನಗೆ ಸಮಸ್ತ ಶುಭಗಳೂ ಕೈಗೂಡುತ್ತವೆ. ಶಿವನು ಹೀಗೆಂದನೆಂದು ಬೇಸರಪಡಬೇಡ " ಎಂದಳು ವಾತ್ಸಲ್ಯದಿಂದ.

ಅವಳು ಹೇಳಿದ ಹಾಗೆಯೇ ವ್ಯಾಸನು ತನ್ನ ಶಿಷ್ಯರೊಂದಿಗೆ ಕೂಡಿ ಭೀಮೇಶ್ವರನನ್ನು ಅರ್ಚಿಸಲು ದಕ್ಷಾರಾಮಕ್ಕೆ ಹೋದನು.





# ಶಿವಲೀಲೆ

ಪುರಾಣ ಕಾಲದ ಮೃಕಂಡು ಮಹರ್ಷಿ ಭೃಗು ಸಂತತಿಯವನು. ಅವನ ಹೆಂಡತಿಯ ಹೆಸರು ಮರುದ್ವತಿ. ಅವರಿಗೆ ಎಷ್ಟು ಕಾಲವಾದರೂ ಸಂತಾನವಾಗಿರಲಿಲ್ಲ. ಅದಕ್ಕಾಗಿ ಪ್ರತ್ಯೇಕ ನೇಮನಿಷ್ಠೆಗಳನ್ನು ಮಾಡಿದರು. ಬೇರೆ ಬೇರೆ ಪುಣ್ಯಕ್ಷೇತ್ರಗಳಿಗೆ ಹೋಗಿ ತಪಸ್ಸು ಮಾಡಿದರು. ಹಾಗೆಯೇ ಕೇದಾರ ಕ್ಷೇತ್ರಕ್ಕೆ ಹೋದರು. ಅಲ್ಲಿ ಕೇದಾರೇಶ್ವರನನ್ನು ಸೇವಿಸುತ್ತ ಧ್ಯಾನ ಮಾಡಿಕೊಂಡಿದ್ದರು.

ಒಂದು ದಿನ ಆ ಮುನಿದಂಪತಿಗಳು ಕೇದಾರೇಶ್ವರನನ್ನು ಪೂಜಿಸಿ ಧ್ಯಾನಮಗ್ನರಾಗಿರುವಾಗ, "ಇನ್ನು ನಿಮ್ಮ ಸೇವೆ ಸಾಕು. ನಿಮ್ಮ ಆಶ್ರಮಕ್ಕೆ ಹೋಗಿರಿ. ನಿಮಗೆ ಪುತ್ರಭಾಗ್ಯ ಉಂಟಾಗುತ್ತದೆ" ಎಂದು ಅವರಿಗೆ ಒಂದು ಅಶರೀರವಾಣಿ ಕೇಳಿಸಿತು.

ಧ್ಯಾನವನ್ನು ಭೇದಿಸಿ ಕಿವಿಗೆ ಬಿದ್ದ ಆ ದಿವ್ಯವಾಣಿಯನ್ನು ಕೇಳಿ ಮೃಕಂಡು ದಂಪತಿಗಳು ಬಹಳ ಸಂತೋಷದಿಂದ ತಮ್ಮ ಮನೆಗೆ ಹಿಂದಿರುಗಿದರು. ಮನೆಯಲ್ಲಿ ಯಥಾವಿಧಿಯಾಗಿ ಗೃಹಸ್ಥಾಶ್ರಮ ಧರ್ಮವನ್ನು ನಿರ್ವಹಿಸಿಕೊಂಡಿರುವಾಗ ಮರುದ್ವತಿ ಗರ್ಭಿಣಿಯಾಗಿ ಕಾಲಕ್ರಮದಲ್ಲಿ ಗಂಡು ಮಗುವನ್ನು ಪ್ರಸವಿಸಿದಳು.

ಅದೇ ಸಮಯದಲ್ಲಿ ಆಕಾಶದಿಂದ, "ಈ ಬಾಲನಿಗೆ ಅಲ್ಪಾಯುಷ್ಯ. ಹನ್ನೆರಡು ವರ್ಷವಷ್ಟೇ ಆಯುಷ್ಯ!" ಎಂಬೊಂದು ಅಶರೀರವಾಣಿ ಮೊಳಗಿತು. ಅದನ್ನು ಕೇಳಿ ಅವರು ಆನಂದದ ಶಿಖರಾಗ್ರದಿಂದ ಒಮ್ಮೆಗೇ ದುಃಖ ಸಾಗರಕ್ಕೆ ಬಿದ್ದರು. ದುಃಖದಾಳಕ್ಕೆ ಮುಳುಗುವುದೇ ಅವರ ಹಣೆಬರೆಹವಾಯಿತು. ಕಡೆಗೆ "ಎಲ್ಲವೂ ಆ ಶಿವನ ಲೀಲೆ. ಕೊಟ್ಟವನೂ ಅವನೇ, ಹೀಗೆ ಹೇಳುವವನೂ ಅವನೇ! ನಾವೇನು ಮಾಡಬಲ್ಲೆವು?" ಎಂದು ತಮಗೆ ತಾವೇ ಸಮಾಧಾನ ತಂದುಕೊಂಡು, ಕಂದನ ಬೊಚ್ಚುಬಾಯಿ ನಗುವಿನಲ್ಲೇ ಮೈಮರೆತರು.

ಯಥಾ ಕಾಲದಲ್ಲಿ ಮೃಕಂಡು ಮಗನಿಗೆ ಜಾತಕರ್ಮ ನಡೆಯಿಸಿ, ಮಾರ್ಕಂಡೇಯನೆಂದು ನಾಮಕರಣ ಮಾಡಿದನು. ಮಾರ್ಕಂಡೇಯನು ದಿನದಿನ

೧. ಮಾರ್ಕಂಡೇಯನ ಕಥೆ



ದೆಂಬ ಸತ್ಯವನ್ನು ಹೊರಪಡಿಸಿ, ಎಲ್ಲ ಸಂಗತಿಯನ್ನೂ ಒಂದೊಂದಾಗಿ ಹೇಳಿ ಮುಗಿಸಿದನು.

ಆದನ್ನು ಕೇಳಿ ಮಾರ್ಕಂಡೇಯನು ಚಿಂತಿಸಿ ಕಂಗೆಡಲಿಲ್ಲ. ಧೀರಚಿತ್ತದಿಂದ ಕರ್ತವ್ಯವನ್ನು ಆಲೋಚಿಸಿ, "ನೀವೇನೂ ಚಿಂತಿಸಬೇಡಿರಿ. ನನ್ನನ್ನು ಆಶೀರ್ವಾದ ಮಾಡಿರಿ. ಈಗಲೇ ನಾನು ತಪಸ್ಸಿಗೆ ಹೋಗುತ್ತೇನೆ. ಶಿವಾನುಗ್ರಹದಿಂದ ಮೃತ್ಯುವನ್ನು ಜಯಿಸಿ ಚಿರಂಜೀವಿಯಾಗಿಯೇ ಬರುತ್ತೇನೆ" ಎಂದು ತಂದೆ ತಾಯಿಗಳಿಗೆ ಪ್ರಣಾಮ ಮಾಡಿದನು.

ಮೃಕಂಡುವೂ, ಮರುದ್ವತಿಯೂ ಕುಮಾರನನ್ನು ಆಲಿಂಗಿಸಿ, "ಚಿರಂಜೀವಿಯಾಗು" ಎಂದು ಆಶೀರ್ವದಿಸಿದರು. ಅದೇ ಸಮಯಕ್ಕೆ ಅಲ್ಲಿಗೆ ನಾರದನು ಬಂದನು. ಮೃಕಂಡು ನಾರದನನ್ನು ಪೂಜಿಸಿ, ತಮ್ಮ ಕುಮಾರನ ಸಂಗತಿಯನ್ನೆಲ್ಲಾ ನಿವೇದಿಸಿಕೊಂಡನು.

ನಾರದನು ಮಾರ್ಕಂಡೇಯನ ದೃಢ ಸಂಕಲ್ಪವನ್ನು ಮೆಚ್ಚಿಕೊಂಡು "ಕಂದಾ, ಮಾರ್ಕಂಡೇಯಾ! ನೀನು ನೆಟ್ಟಗೆ ಗೌತಮೀ ತೀರಕ್ಕೆ ಹೋಗು. ಅಲ್ಲಿ ಪಂಚಾಕ್ಷರೀ ಮಂತ್ರದಿಂದ, ತದೇಕ ದೀಕ್ಷೆಯಲ್ಲಿ ಶಿವಾರ್ಚನೆ ಮಾಡು. ನಿನ್ನ ಉದ್ದೇಶ ಸಿದ್ಧಿಸುತ್ತದೆ" ಎಂದು ಹೇಳಿ, ಆಶೀರ್ವಾದ ಮಾಡಿ ಹೊರಟು ಹೋದನು.

ಮಾರ್ಕಂಡೇಯನು ಗೌತಮೀ ನದಿಯ ತೀರಕ್ಕೆ ಹೋಗಿ, ಸೈಕತ ಲಿಂಗವನ್ನು ಪ್ರತಿಷ್ಠೆಮಾಡಿ, "ಹೇ! ಚಂದ್ರಶೇಖರಾ! ನೀನೇ ನನ್ನನ್ನು ರಕ್ಷಿಸಬೇಕು. ನಿನ್ನ ಪಾದಗಳನ್ನು ಆಶ್ರಯಿಸಿರುವ ನನ್ನನ್ನು ಯಮನು ಏನು ತಾನೇ ಮಾಡಬಲ್ಲನು? ನಿನಗೇ ಶರಣಾಗಿದ್ದೇನೆ" ಎಂದು ಶಿವಧ್ಯಾನದಲ್ಲಿ ತಪಸ್ಸು ಸಾಗಿಸತೊಡಗಿದನು.

ಆಗ ತ್ರಿಲೋಕ ಸಂಚಾರಿಯಾದ ನಾರದನು ಯಮನ ಹತ್ತಿರ ಹೋಗಿ, "ನೋಡಿದೆಯಾ ಯಮ

ಪ್ರವರ್ಧಮಾನನಾಗಿ ಬೆಳೆಯುತ್ತ, ಉಪನಯನವಾದ ಮೇಲೆ ಗುರುಕುಲಕ್ಕೆ ಹೋಗಿ, ವಿದ್ಯಾಬುದ್ಧಿಗಳನ್ನು ಕಲಿಯುತ್ತ ಹನ್ನೊಂದು ವರ್ಷದ ಹುಡುಗನಾಗಿ ತಂದೆ ತಾಯಿಗಳ ಬಳಿಗೆ ಬಂದನು. ಬ್ರಹ್ಮ ತೇಜಸ್ಸಿನಿಂದ ಮುದ್ದುಗುಲುಕುವ ಕುಮಾರನನ್ನು ನೋಡಿದ ಕೂಡಲೇ ಹೆತ್ತವರ ಎದೆ ಗುಂಡಿಗೆಯೊಳಗೆ ಗಡಗಡ ಪ್ರಾರಂಭವಾಯಿತು. ಇನ್ನು ಒಂದು ವರ್ಷವಷ್ಟೇ ಈ ಹುಡುಗನ ಗಡು!

ಮರುದ್ವತಿ ಕುಮಾರನನ್ನು ಬಿಡದೆ ಅಪ್ಪಿಕೊಂಡು ಕಣ್ಣೀರು ಸುರಿಸುತ್ತಿದ್ದಳೇ ಹೊರತು, ವಿದ್ಯೆ ಕಲಿತು ಬಂದ ಸುಕುಮಾರನನ್ನು ನೋಡಿ ಸಂತೋಷಪಡಲಿಲ್ಲ. ಅದನ್ನು ನೋಡಿ ಮಾರ್ಕಂಡೇಯನು ಎಷ್ಟೆಷ್ಟು ಕೇಳಿದರೂ ಬಿಕ್ಕಿಬಿಕ್ಕಿ ಅಳುವಳೇ ಹೊರತು ಉತ್ತರ ಕೊಡುತ್ತಿದ್ದಿಲ್ಲ. ಕಡೆಗೆ ಮೃಕಂಡುವೇ ಹೇಳಲಾಗದೆ ತಡಕಾಡಿಕೊಂಡು ಮಗನೊಂದಿಗೆ ಇನ್ನು ಒಂದು ವರ್ಷದಲ್ಲಿ ಅವನಿಗೆ ಮೃತ್ಯು ಬರುತ್ತ



ಧರ್ಮಾ! ಮೃತ್ಯುವನ್ನು ತಪ್ಪಿಸಿಕೊಳ್ಳಬೇಕೆಂದು ಮಾರ್ಕಂಡೇಯನೆಂಬ ಮುನಿಬಾಲಕನು ತಪಸ್ಸು ಮಾಡುತ್ತಾ ಇದ್ದಾನೆ. ಇನ್ನು ನಿನ್ನ ಬಲವೆಷ್ಟೆಂಬುದು ಲೋಕಕ್ಕೆ ತಿಳಿಯುವ ಕಾಲವು ಸಮೀಪಿಸಿತು" ಎಂದು ಆದೊಂದು ವಿಶೇಷ ಸುದ್ದಿಯೆಂಬಂತೆ ಹೇಳಿ ಹೊರಟುಹೋದನು.

ಮಾರ್ಕಂಡೇಯನ ಆಯುಷ್ಯವು ಪೂರ್ತಿಯಾಗುವ ದಿನ ಹತ್ತಿರವಾಯಿತು. ಯಮನು ಮಾರ್ಕಂಡೇಯನ ಪ್ರಾಣವನ್ನು ತೆಗೆದುಕೊಂಡು ಬರಲು ತನ್ನ ದೂತರನ್ನು ಕಳುಹಿಸಿದನು. ಯಮಕಿಂಕರರು ಮಾರ್ಕಂಡೇಯನ ಹತ್ತಿರ ಬರಲು ಸಾಧ್ಯವಾಗದೆ ಹಿಂಜರಿದು ಓಡಿಹೋಗಿ ಯಮನ ಮುಂದೆ ತಲೆಬಾಗಿ ನಿಂತರು. ಆದನ್ನು ನೋಡಿ ಯಮನೇ, ದಂಡ ಪಾಶಗಳನ್ನು ಧರಿಸಿಕೊಂಡು ಕರಿಕೋಣದ ಮೇಲೆ ಕುಳಿತುಕೊಂಡು ಮಾರ್ಕಂಡೇಯನ ಬಳಿಗೆ ಹೊರಟನು. ಅವನು ಬಂದಾಗ ಮಾರ್ಕಂಡೇಯನು ಶಿವಲಿಂಗಕ್ಕೆ ತಲೆಯನ್ನು ತಾಗಿಸಿ ಎರಡು ಕೈಗಳಿಂದಲೂ ಶಿವಲಿಂಗವನ್ನು ಗಟ್ಟಿಯಾಗಿ ಬಿಗಿದಪ್ಪಿಕೊಂಡು ಧ್ಯಾನಮಗ್ನನಾಗಿದ್ದನು. ಆ ಸಮಯದಲ್ಲಿ ಯಮನು ತನ್ನ ಕಾಲ ಪಾಶವನ್ನು ಮಾರ್ಕಂಡೇಯನ ಕಂಠಪ್ರದೇಶಕ್ಕೆ ಬೀಸಿ ಹಾಕಿದನು. ಆ ಪಾಶವು ಶಿವಲಿಂಗದ ಮೇಲಿಂದಾಗಿ ಮಾರ್ಕಂಡೇಯನ ಕಂಠವನ್ನೂ ಸುತ್ತಿಕೊಂಡಿತು.

ಮರುಕ್ಷಣದಲ್ಲಿ ಶಿವಲಿಂಗದಿಂದ ಶಿವನು ಪ್ರತ್ಯಕ್ಷನಾಗಿ ಪ್ರಳಯರುದ್ರ ರೂಪದಲ್ಲಿ ಬಿಡಿಸಿದ ಮೂರನೆಯ ಕಣ್ಣಿನೊಂದಿಗೆ ಆವಿರ್ಭವಿಸಿ, ಯಮನ ಮೇಲೆ ತ್ರಿಶೂಲವನ್ನು ಗುರಿಹಿಡಿದೆತ್ತಿದನು. ಯಮನು ಭಯದಿಂದ ಗದಗದ ನಡುಗುತ್ತ, ಕೈಗಳನ್ನೆತ್ತಿ ಜೋಡಿಸುತ್ತಾ, "ಹರಹರಾ! ರಕ್ಷಿಸು! ರಕ್ಷಿಸು!" ಎಂದು ಕುಸಿಬಿದ್ದನು.

ಶಿವನು ಮಾರ್ಕಂಡೇಯನ ತಲೆಯ ಮೇಲೆ ಅಭಯ ಹಸ್ತವನ್ನಿಟ್ಟು, "ವತ್ಸಾ! ನಿನಗೆ ಮೃತ್ಯುವೇ ಇಲ್ಲ. ಕಲ್ಪ ಕಲ್ಪಾಂತಗಳನ್ನು ನೋಡುತ್ತ ಚಿರಂಜೀವಿಯಾಗಿರುವಿ!" ಎಂದು ವರಕೊಟ್ಟನು.

ಆಗ ಶಿವನ ಕೋಪವನ್ನು ನೋಡಿ ಹೆದರಿದ ದೇವತೆಗಳೆಲ್ಲಾ ಅಲ್ಲಿಗೆ ಬಂದು, ಶಿವನಿಗೆ ಕೈ ಮುಗಿದು, ಯಮನಿಲ್ಲದಿದ್ದರೆ ಲೋಕಗಳು ಉಳಿಯಲಾರವೆಂದು ಪ್ರಾರ್ಥಿಸುತ್ತ, ಯಮನನ್ನು ಮನ್ನಿಸ ಬೇಕೆಂದು ಶಿವನನ್ನು ಬೇಡಿಕೊಂಡರು. ಅವನ ಅನುಗ್ರಹದಿಂದ ಯಮನು ಮತ್ತೆ ಪುನರ್ಜನ್ಮ ಪಡೆದವನಂತೆ ಎದ್ದು ತನ್ನ ಲೋಕಕ್ಕೆ ಹೊರಟು ಹೋದನು.

ಆ ದಿನ ತಮ್ಮ ಕುಮಾರನನ್ನು ಹುಡುಕುತ್ತಾ ಬಂದ ಮರುದ್ವತೀ ಮೃಕಂಡುಗಳು ಶಿವಾನುಗ್ರಹ ಪಡೆದು ನೂತನ ಕಳೆಯಿಂದ ಬೆಳಗುವ ಕುಮಾರನನ್ನು ನೋಡಿ, ಶಿವಲೀಲೆಯನ್ನು ಕೊಂಡಾಡುತ್ತ ಚಿರಂಜೀವಿಯಾದ ಮಗನೊಂದಿಗೆ ತಮ್ಮ ನಿವಾಸಕ್ಕೆ ತೆರಳಿದರು. ಅಂದಿನಿಂದ ಹಿರಿಯರ ಆಶೀರ್ವಾದದ

ವಚನವಲ್ಲಿ "ಚಿರಂಜೀವಿ" ನೆಲೆಯಾಗಿ ನಿಂತನು. ಮಾರ್ಕಂಡೇಯನು ಬಹುಕಾಲ ಜೀವಿಸಿಕೊಂಡಿರುವಾಗ, ಹೆಚ್ಚುಕಾಲ ಜೀವಿಸಿದವರು ಯಾರೆಂದು ಅವನಿಂದ ತಿಳಿದುಕೊಂಡವರೂ ಇದ್ದರು.

ಇಂದ್ರದ್ಯುಮ್ನನೆಂಬ ರಾಜನು ಬದುಕಿರುವಾಗ ಬಹುದೊಡ್ಡ ಯಶಸ್ಸನ್ನು ಸಂಪಾದಿಸಿ ಆ ಯಶಸ್ಸು ಉಳಿದಷ್ಟು ಕಾಲದವರೆಗೆ ಸ್ವರ್ಗಸುಖಗಳನ್ನು ಅನುಭವಿಸಿದನು. ಆಮೇಲೆ ಸ್ವರ್ಗದಲ್ಲಿದ್ದವರು "ಭೂಲೋಕದಲ್ಲಿ ನಿನ್ನ ಹೆಸರು ಹೇಳಿಕೊಳ್ಳುವವರು ಯಾರೂ ಇಲ್ಲ. ಆದುದರಿಂದ ಇನ್ನುಮೇಲೆ ನಿನಗೆ ಸ್ವರ್ಗದಲ್ಲಿ ಸ್ಥಾನವಿಲ್ಲ. ಭೂಮಿಗೇ ಹಿಂದಿರುಗಿ ಬಿಡು" ಎಂದರು.

ಇಂದ್ರದ್ಯುಮ್ನನು ಭೂಲೋಕಕ್ಕೆ ಹಿಂದಿರುಗಿ ಬಂದು, ತನ್ನ ಹೆಸರು ನೆನಪಿರುವವರನ್ನು ಹುಡುಕುತ್ತ ಮಾರ್ಕಂಡೇಯನ ಬಳಿಗೆ ಬಂದನು.

"ನಾನು ನಿನ್ನನ್ನು ಅರಿಯೆನು. ನನಗಿಂತ ಹಿರಿಯನಾಗಿ ಪ್ರಾವಾರಕರ್ಣನೆಂಬ ಘೂಕ (ಗೂಗೆ) ನಿದ್ದಾನೆ. ಅವನನ್ನು ಕೇಳು" ಎಂದನು ಮಾರ್ಕಂಡೇಯ. ಇಬ್ಬರೂ ಕೂಡಿ ಪ್ರಾವಾರಕರ್ಣನ ಬಳಿಗೆ ಹೋದರು.

"ನಾನು ನಿನ್ನನ್ನು ಅರಿಯೆನು. ಆದರೆ ನನಗಿಂತ ಹಿರಿಯನಾಗಿ ನಾಳೀಕಜಂಘನೆಂಬ ಬಕ (ಕೊಕ್ಕರೆ) ನೊಬ್ಬನಿದ್ದಾನೆ. ಅವನನ್ನು ಕೇಳೋಣ ಬನ್ನಿ" ಎಂದು ಪ್ರಾವಾರಕರ್ಣನೂ ಅವರೊಂದಿಗೆ ಹೊರಟನು.

ನಾಳೀಕಜಂಘನಿಗೂ ಇಂದ್ರದ್ಯುಮ್ನನ ಪರಿಚಯ ವಿರಲಿಲ್ಲ. ಅವನು ಅವರನ್ನು ಕರೆದುಕೊಂಡು ಅವನಿಗಿಂತ ಹೆಚ್ಚು ವಯಸ್ಸಾದ ಅಕೂಪಾರನೆಂಬ ಆಮೆಯ ಬಳಿಗೆ ಹೋದನು.

ಅಕೂಪಾರನು ಇಂದ್ರದ್ಯುಮ್ನನನ್ನು ನೋಡಿದ ಕೂಡಲೇ, "ಓ ಓ! ಇಂದ್ರದ್ಯುಮ್ನರು! ನಿಮ್ಮ ನೆನಪಿನಲ್ಲೇ ನಾನಿದ್ದೇನೆ. ನಾನಿರುವ ಈ ಕೊಳವು ನಿಮ್ಮಿಂದಲೇ ಉಂಟಾಯಿತು. ನೀವು ಅನೇಕ ಯಜ್ಞಗಳನ್ನು ಮಾಡಿ ಗೋವುಗಳನ್ನು ದಾನಕೊಡುವಾಗ ಗೋವುಗಳ ತುಳಿತದಿಂದ ಏರ್ಪಟ್ಟ ಕೊಳವಿದು" ಎಂದನು.



ಆಗ ದೇವದೂತರು ಇಂದ್ರದ್ಯುಮ್ನನ ಕೀರ್ತಿ ಇನ್ನೂ ಭೂಮಿಯಲ್ಲಿ ಉಳಿದಿರುವುದೆಂದು ತಿಳಿದು ಅವನನ್ನು ಮತ್ತೆ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದರು.

**ಭೀ**ಮಾವತಿ ಎಂಬ ಊರಿನಲ್ಲಿ ಸಿವಭಕ್ತನಾದ ಸೋಮಯಾಜಿಯೊಬ್ಬನು ವಾಸವಾಗಿದ್ದನು. ಅವನಿಗೆ ಸಿದ್ಧರಾಮನೆಂಬ ಒಬ್ಬ ಮಗನು ಹುಟ್ಟಿದನು. ಆ ಹುಡುಗನಿಗೆ ಏಳು ವರ್ಷವಾದಾಗ ಸೋಮಯಾಜಿ ಮೃತಪಟ್ಟನು. ತಂದೆಯನ್ನು ಕಳೆದುಕೊಂಡ ಮಗನನ್ನು ತಾಯಿಯೇ ಅತ್ಯಂತ ಅಕ್ಕರೆಯಿಂದ ಬೆಳೆಸುತ್ತಾ ಬರುತ್ತಿದ್ದಳು.

ದೀಪಾವಳಿಯ ದಿನಗಳು ಸಮೀಪಿಸಿಕೊಂಡಿರುವಾಗ ಒಂದು ದಿನ ಸಿದ್ಧರಾಮನು ತನ್ನ ಈಡು

ಜೋಡಿನ ಗೆಳೆಯರೊಂದಿಗೆ, ಸಮಿಧೆಗಳನ್ನೂ, ಎಲೆಗಳನ್ನೂ ತರಲು ಅಡವಿಗೆ ಹೋದನು. ಅಲ್ಲಿ ಹುಡುಗರೆಲ್ಲಾ ಒಂದು ಆಲದ ಮರದ ಕೆಳಗೆ ಕುಳಿತುಕೊಂಡು ಕಾಡು ಹರಟೆ ಮಾತಾಡಿಕೊಂಡಿದ್ದರು.

"ಈ ದೀಪಾವಳಿಗೆ ನಮ್ಮ ಅಕ್ಕನನ್ನೂ ಬಾವನನ್ನೂ ಕರೆದಿದ್ದೇವೆ. ಹಬ್ಬಕ್ಕೆ ನಮ್ಮಲ್ಲಿ ಅಪ್ಪಮಾಡುತ್ತಾರೆ. ಅಕ್ಕನಿಗೂ ಬಾವನಿಗೂ ಹೊಸ ವಸ್ತ್ರ ಕೊಡುತ್ತಾರೆ. ನಮಗೂ ಸಿಗುತ್ತೆ" ಎಂದು ಹುಡುಗರು ಒಬ್ಬೊಬ್ಬರೊಡನೊಬ್ಬರು ಉತ್ಸಾಹದಿಂದ ಮಾತಾಡುತ್ತಿದ್ದರು.

ಆ ಮಾತು ಕೇಳಿ ಸಿದ್ಧರಾಮನು "ನಾವು ಕೂಡಾ ಹಬ್ಬಕ್ಕೆ ಅಕ್ಕನನ್ನೂ ಬಾವನನ್ನೂ ಕರೆಯುತ್ತೇವೆ. ನಮ್ಮ ಮನೆಯಲ್ಲಿಯೂ ಪಾಯಸ ಮಾಡುತ್ತಾಳೆ ನನ್ನಮ್ಮ. ಅಕ್ಕನಿಗೂ ಬಾವನಿಗೂ ಹೊಸ ಬಟ್ಟೆ ಕೊಡುತ್ತೇವೆ" ಎಂದು ಹೆಚ್ಚಳಿಸಿಕೊಂಡು ಹೇಳಿದನು.

ಆ ಮಾತು ಕೇಳಿ ಹುಡುಗರೆಲ್ಲ ಗೇಲಿಯಾಗಿ ನಕ್ಕು, "ನಿನಗೆ ಮೊದಲು ಅಕ್ಕನೇ ಇಲ್ಲ. ಬಾವ ಎಲ್ಲಿಂದ ಬರುತ್ತಾರೆ ? ನಮ್ಮ ಹತ್ತಿರ ಸುಳ್ಳು ಸುಳ್ಳೇ ಜಂಬ ಹೊಡೆಯುವಿಯಾ ? ಹೇಳು ನೋಡುವಾ, ಯಾರು ನಿನ್ನ ಅಕ್ಕಾ ? ಹೆಸರೇನು ? ಎಲ್ಲಿದೆ ಅವರ ಮನೆ ? ಅವರು ಏನು ಕೆಲಸ ಮಾಡುತ್ತಾರೆ ? ಎಷ್ಟು ಓದಿದ್ದಾರೆ ? ಅವರಿಗೆ ಎಷ್ಟು ಮಕ್ಕಳು ? ಆ ಮಕ್ಕಳ ಹೆಸರುಗಳೇನು ? ಗೊತ್ತಿದೆಯೇ ನಿನಗೆ ?" ಎಂದು ನಗುತ್ತಾ ಸಿದ್ಧರಾಮನ ಮೇಲೆ ಪ್ರಶ್ನೆಗಳ ಮಳೆಯನ್ನೇ ಸುರಿಸಿದರು.

ಆ ಪ್ರಶ್ನೆಗಳಿಗೆಲ್ಲ ಸಮಾಧಾನ ಹೇಳಲು ಗೊತ್ತಾಗದೆ ಸಿದ್ಧರಾಮನು ಅಪಮಾನಿತನಾಗಿ ಅಳುತ್ತಾ ಮನೆಗೆ ಬಂದನು.

ಮಗನು ಅಳುತ್ತಾ ಬರುವುದನ್ನು ನೋಡಿ, ತಾಯಿ ಗಾಬರಿಯಾಗಿ ಅವನನ್ನು ಬಾಚಿ ತಬ್ಬಿಕೊಂಡು, "ಏನಾಯಿತಪ್ಪಾ ? ಬಿದ್ದೆಯಾ ? ಪೆಟ್ಟಾಯಿತೆ ? ಯಾರಾದರೂ ಹೊಡೆದರೆ ? ಯಾಕೆ ಅಳುತ್ತೀಯಪ್ಪಾ ?" ಎಂದು ಕೇಳಿದಳು.

ಸಿದ್ಧರಾಮನು ತಾಯಿಯೊಂದಿಗೆ ಜತೆ ಹುಡುಗರು ಮಾಡಿದ ಎಗತಾಳಿಯನ್ನು ಕುರಿತು ಹೇಳಿದನು.

ಅದನ್ನು ಕೇಳಿ ತಾಯಿ "ಅವರ ಮಾತಿಗೇನು ಬಿಡಪ್ಪಾ, ನಾನು ಹೇಳುತ್ತೇನೆ. ನಿನ್ನ ಅಕ್ಕನ ಹೆಸರು ಭ್ರಮರಾಂಬೆ. ನಿನ್ನ ಬಾವ ಮಲ್ಲಣ್ಣ. ಅವರ ಮನೆ ಶ್ರೀಶೈಲ ಪರ್ವತದ ಮೇಲೆ ಇದೆ. ಅವರಿಗೆ ಅಷ್ಟ ಐಶ್ವರ್ಯಗಳೂ ಇವೆ. ಗಣಪತಿ, ಕುಮಾರಸ್ವಾಮಿ ಎಂಬ ಮಗಂದಿರು ಅವರಿಗಿದ್ದಾರೆ. ಆ ನಿನ್ನ ಬಾವ ಸರ್ವೇಶ್ವರನು. ಲೋಕದವರೆಲ್ಲ ಅವನು ಹೇಳಿದಂತೆ ನಡೆದುಕೊಳ್ಳುತ್ತಾರೆ. ನಿನ್ನ ಬಾವನಂಥ ಬಾವ ಪ್ರಪಂಚದಲ್ಲಿ ಬೇರೆ ಯಾರಿಗೂ ಇಲ್ಲ. ಗೊತ್ತಾಯಿತೇನಪ್ಪಾ ?" ಎಂದಳು.






ತಾಯಿ ಹೇಳಿದ ಮಾತುಗಳನ್ನು ಕೇಳಿ ಸಿದ್ಧರಾಮನಿಗಾದ ಸಂತೋಷಕ್ಕೆ ಪಾರವಿರಲಿಲ್ಲ. ಅವನಿಗೆ ಬಹಳ ಹೆಮ್ಮೆ ಎನಿಸಿತು. "ಹಾಗಾದರೆ ಅವರನ್ನು ದೀಪಾವಳಿಗೆ ಕರೆದುಕೊಂಡು ಬರಬೇಕು ಅಮ್ಮಾ. ಎಲ್ಲರ ಅಕ್ಕ ಬಾವಂದಿರೂ ಹಬ್ಬಕ್ಕೆ ಬರುತ್ತಾರಂತೆ. ಅಮ್ಮಾ, ನಾವು ಈವರೆಗೂ ನಮ್ಮ ಅಕ್ಕನನ್ನೂ ಬಾವನನ್ನೂ ಏಕೆ ಕರೆಯಲಿಲ್ಲ ? " ಎಂದನು.

"ನಮ್ಮಲ್ಲಿ ಅಷ್ಟು ದೂರದವರೆಗೆ ಹೋಗಿ ಅವರನ್ನು ಕರೆದುಕೊಂಡು ಬರಲು ಯಾರಿದ್ದಾರೆ ? ನಿನ್ನ ಅಪ್ಪ ತೀರಿಹೋಗಿ ಬಿಟ್ಟರಷ್ಟೆ ? ನೀನೇನೋ ಚಿಕ್ಕ ಹುಡುಗ. ಕಾಡಿನ ದಾರಿಯಲ್ಲಿ ಹೋಗಬೇಕು. ಕಾಡಿನಲ್ಲಿ ಸಿಂಹಗಳೂ, ಹೆಬ್ಬುಲಿಗಳೂ, ಕರಡಿಗಳೂ, ನಾಗರಹಾವುಗಳೂ ಇವೆ. ಅಲ್ಲದೇ, ಮಗನೇ, ನಾವು ಬಡವರು. ಅಕ್ಕ ಬಾವಂದಿರು ಬಹುದೊಡ್ಡ ಶ್ರೀಮಂತರಾದವರು. ನಮ್ಮ ಬಡ ಮನೆಗೆ ಬಂದು ನಮಗೆ ಕಷ್ಟ ಕೊಡುವವರಲ್ಲಪ್ಪಾ. ಅವರೊಂದಿಗೆ ದೊಡ್ಡ ಪರಿವಾರವೇ ಇದೆ. ಒಂದು ಹೊತ್ತು ತಿಂದರೆ ಇನ್ನೊಂದು ಹೊತ್ತು ತಿನ್ನಲು ಸಾಲದ ನಾವು ಅಷ್ಟೊಮಂದಿಗೆ ಹೇಗೆ ಉಪಚಾರ ಮಾಡೇವು? ನೀನು ದೊಡ್ಡವನಾಗಿ ಸಂಪಾದಿಸುವಾಗ ಅಕ್ಕನನ್ನೂ ಬಾವನನ್ನೂ ಕರೆದುಕೊಂಡು ಬರುವಿಯಂತೆ " ಎಂದು ತಾಯಿ ಸಿದ್ಧರಾಮನನ್ನು ಸಮಾಧಾನಪಡಿಸಿದಳು.

ಸಿದ್ಧರಾಮನು ಅದಕ್ಕೇನೂ ಹೇಳದೆ ಒಂದು ಬಗೆಯ ಗಂಭೀರಭಾವ ತಾಳಿದನು. ಮರುದಿನ ಬೆಳಗಾಗುವುದಕ್ಕೆ ಮೊದಲೇ ಎದ್ದು ತಾಯಿಯೊಂದಿಗೆ ಹೇಳದೆ, ಮನೆಯಿಂದ ಹೊರಗೆ ಹೊರಟನು. ದಾರಿಯಲ್ಲಿ ಕಂಡವರೊಂದಿಗೆ ಶ್ರೀಶೈಲಕ್ಕೆ ದಾರಿ ಹೇಗೆಂದು ಕೇಳುತ್ತಾ, ಕ್ರೂರ ಮೃಗಗಳನ್ನೂ, ದಾರಿಯ ಕಷ್ಟವನ್ನೂ, ಆಯಾಸವನ್ನೂ ಲಕ್ಷ್ಯಮಾಡದೆ ಕಡೆಗೆ ಶ್ರೀಶೈಲವನ್ನು ತಲಪಿದನು. ಅಲ್ಲಿ ಎಷ್ಟೋ ತೀರ್ಥಗಳೂ, ದೇವಾಲಯಗಳೂ ಇದ್ದುವು.

ಸಿದ್ಧರಾಮನು ತನ್ನ ಅಕ್ಕ ಬಾವಂದಿರು ಎಲ್ಲಿರುವರೆಂದು ನೋಡುತ್ತಾ ಅಲ್ಲೆಲ್ಲಾ ಸುಮ್ಮನೆ ತಿರುಗಿದನು. ಅವರು ತನ್ನನ್ನು ನೋಡಿದ ಕೂಡಲೇ

೨. ಸಿದ್ಧರಾಮನ ಭಕ್ತಿ



ದಿರುವರೊ? ಎಷ್ಟು ಐಶ್ವರ್ಯವಂತರಾದರೂ ಬಂಧುತ್ವ ಹೇಗೆ ಬಿಟ್ಟು ಹೋಗುತ್ತೆ? ನಾವು ಬಡವರೆಂದು ಅಲಕ್ಷ್ಯಮಾಡದೆ ನಮ್ಮ ಮನೆಗೆ ಬರಲೇಬೇಕು. ಲಿಂಗ ಸ್ವರೂಪಾ! ನೀನೇ ಅವರಿಗೆ ಹೇಳಬೇಕು ದೇವಾ! ಅವರನ್ನು ಕರೆಯದೆ ನಾನಂತೂ ಒಬ್ಬನೇ ಹಿಂದಿರುಗಿ ಹೋಗುವುದಿಲ್ಲ" ಎಂದನು.

ಸಿದ್ಧರಾಮನ ಪ್ರಲಾಪಗಳು ಅರಣ್ಯರೋದನವೇ ಆಯಿತು. ಅವನು ದೇವಿಯನ್ನು ಕೂಡಾ ಅದೇ ವಿಧವಾಗಿ ಬಾಯಿಬಿಟ್ಟು ಪ್ರಾರ್ಥಿಸಿಕೊಂಡನು. ಯಾವ ಲಾಭವೂ ಕಾಣಲಿಲ್ಲ.

ತಾಳಲಾಗದಷ್ಟು ನಿರಾಶೆಯಿಂದ ಸಿದ್ಧರಾಮನು ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸಿಕೊಂಡನು. ಅಕ್ಕನನ್ನೂ ಬಾವನನ್ನೂ ಕರೆದುಕೊಂಡು ಬಂದು ತಾಯಿಯನ್ನು ಮೆಚ್ಚಿಸುವೆನೆಂದು ನಂಬಿದ ಅವನಿಗೆ, ಬಹುದೊಡ್ಡ ನಿರಾಶೆಯಾಯಿತು. ಇನ್ನು ಜತೆ ಹುಡುಗರೊಂದಿಗೆ ಮುಖವೆತ್ತಿ ತಿರುಗಲು ಸಾಧ್ಯವೆ? ಎಲ್ಲರ ಮುಂದೆ ಬಹುದೊಡ್ಡ ಅವಮಾನ! ಅದನ್ನೆಲ್ಲ ಸಹಿಸುವುದಕ್ಕಿಂತ ಸಾಯುವುದೇ ಮೇಲು. ಅಕ್ಕಾ ಬಾವಂದಿರಿರುವ ಸ್ಥಳದಲ್ಲೇ ಸತ್ತರೆ ಆ ಮಾತು ಅವರಿಗೇ ಬರುತ್ತದೆ.

ಹೀಗೆ ಅಂದುಕೊಂಡು ಸಿದ್ಧರಾಮನು ಬೆಟ್ಟದ ಶಿಖರ ಮೇಲೆ ಹತ್ತಿ ಅಲ್ಲಿಂದ ಕೆಳಗಿನ ಅಗಾಧಕ್ಕೆ ಹಾರಲು ನೋಡಿದನು.

ಅಷ್ಟರಲ್ಲಿ ಅವನ ಹೆಗಲುಗಳನ್ನು ಯಾರೋ ಹಿಡಿದರು. ಅವನ ಒಂದು ಬದಿಯಲ್ಲಿ ಗಂಡುಸೂ, ಇನ್ನೊಂದು ಬದಿಯಲ್ಲಿ ಒಬ್ಬಳು ಹೆಂಗುಸೂ ನಿಂತಿದ್ದರು.

"ಯಾರು ನೀವು? ಸತ್ತುಬಿಡಬೇಕೆಂದು ನಾನು ಹಾರುವಾಗ ನೀವೇಕೆ ನನ್ನನ್ನು ತಡೆಯಬೇಕು? ನನ್ನ ಅಕ್ಕನಿಗೂ ಬಾವನಿಗೂ ಇಲ್ಲದ ಕರುಣೆ ನಿಮಗೇಕೆ ಬೇಕು?" ಎಂದನು ಸಿದ್ಧರಾಮ.

ಗುರುತಿಸುವರೆಂದು ಅವನ ಭಾವನೆ. "ಮಲ್ಲಿಕಾರ್ಜುನ ಎಂಬವರು ಎಲ್ಲಿದ್ದಾರೆ?" ಎಂದು ಕೆಲವವರೊಡನೆ ಕೇಳುತ್ತಿದ್ದನು. ಅವರು ಅವನಿಗೆ ದೇವಾಲಯವನ್ನು ತೋರಿಸುತ್ತಿದ್ದರು. ಸಿದ್ಧರಾಮನು ಅಲ್ಲಿಗೆ ಹೋಗಿ ನೋಡಿದರೆ ಲಿಂಗದ ಹೊರತು ಮತ್ತೇನೂ ಇಲ್ಲ!

ತಿರುಗಿ ತಿರುಗಿ ಸಿದ್ಧರಾಮನು ಬಹಳ ದಣಿದು ಹೋದನು. ಅವನು ದೇವಾಲಯದ ಲಿಂಗದ ಇದಿರಿನಲ್ಲಿ ಕುಳಿತುಕೊಂಡು, "ಬಾವಯ್ಯನನ್ನೂ, ಅಕ್ಕನನ್ನೂ ದೀಪಾವಳಿಗೆ ಕರೆದುಕೊಂಡು ಹೋಗಬೇಕೆಂದು ಯಾರಿಗೂ ಹೇಳದೆ, ಮನೆಯಿಂದ ಹೊರಟು ಬಹಳ ಕಷ್ಟಪಟ್ಟು ಬಂದಿದ್ದೇನೆ. ನಮ್ಮ ಊರಿನಲ್ಲಿ ಎಲ್ಲಾ ಮನೆಗಳ ಅಕ್ಕಂದಿರೂ ಬಾವಂದಿರೂ ದೀಪಾವಳಿಗೆ ಬರುತ್ತಾರೆ. ನನ್ನ ಅಮ್ಮ ಅವರಿಬ್ಬರನ್ನೂ ನೋಡಬೇಕೆಂದು ಯಾವಾಗಲೂ ಹೇಳಿಕೊಂಡಿರುತ್ತಾಳೆ. ಇಷ್ಟು ಕಾಲ ಕರೆಯಲಿಲ್ಲವೆಂದು ಕೋಪವೇನೋ? ನನ್ನನ್ನು ನೋಡಿಯೂ ಮಾತಾಡಿಸ



ಆಗ ಆ ಹೆಂಗುಸು ವಾತ್ಸಲ್ಯದಿಂದ "ನಾವು ಪರಕೀಯರೆಂದುಕೊಂಡೆಯೇನೋ ತಮ್ಮಾ? ನಾನೇ ನಿನ್ನಕ್ಕ ಭ್ರಮರಾಂಬಿಕೆ ಕಣೋ! ಇವರೇ ನಿನ್ನ ಬಾವಯ್ಯ. ನಿನಗೇ ನಮ್ಮ ಗುರುತಿಲ್ಲ ಪಾಪ. ನಾವು ನಿನ್ನನ್ನು ನೋಡಿಕೊಂಡೇ ಇದ್ದೇವಪ್ಪಾ? ಮನೆಯಲ್ಲಿ ಅಮ್ಮನೊಂದಿಗೆ ಹೇಳದೆ ಬಂದ ನೀನು ಎಷ್ಟು ಗಟ್ಟಿಗನೋ ನೋಡುವಾ ಅಂತ ಕಾದಿದ್ದೆವು. ನಮ್ಮ ಸೋಮಯಾಜಿಗಳ ಮಗ ನಮ್ಮಲ್ಲಿಗೆ ಬಂದಿದ್ದಾನೆಂದರೆ, ನಿನ್ನನ್ನು ಕಂಡುಹಿಡಿಯದೇ ಇರುತ್ತೇವೆಯೇ?" ಎಂದಳು.

ಸಿದ್ಧರಾಮನು ಪರಮಾನಂದದಿಂದ ತುಂಬಿದವನಾಗಿ ಅಕ್ಕನಿಗೂ ಬಾವನಿಗೂ ಕಾಲಿಗೆ ಬಿದ್ದು ನಮಸ್ಕಾರ ಮಾಡಿದನು. ಅವರು ಅವನಿಗೆ ತಮ್ಮ ಮಗಂದಿರನ್ನೂ ಪರಿವಾರವನ್ನೂ ತೋರಿಸಿದರು. ಸಿದ್ಧರಾಮನು ಅವರನ್ನೆಲ್ಲ ತನ್ನೊಂದಿಗೆ ಬರಬೇಕೆಂದು ಕೇಳಿಕೊಂಡನು.

ಇಲ್ಲಿ ಹೀಗಿರುವಾಗ ಅಲ್ಲಿ ಸಿದ್ಧರಾಮನ ತಾಯಿ ಹುಡುಗನನ್ನು ಅಲ್ಲೆಲ್ಲಿಯೂ ಕಾಣದೆ ತತ್ತರಿಸಿಕೊಂಡಿದ್ದಳು. ಮಗನು ತನ್ನ ಮಾತುಗಳನ್ನೆಲ್ಲ ನಂಬಿ ಶ್ರೀಶೈಲಕ್ಕೇ ಹೋಗಿರುವನೆಂದು ಅವಳಿಗೆ ಸಂಶಯವಾಯಿತು. ಅವನು ಜೀವದೊಂದಿಗಿದ್ದಾನೋ ಇಲ್ಲವೋ ಎಂದು ಗೋಳಾಡುತ್ತಿದ್ದಳು.

ಕೆಲವು ದಿನಗಳು ಕಳೆದುವು. ದೀಪಾವಳಿ ಹಬ್ಬದ ದಿನಗಳು ಬಂದುವು. ಆ ದಿನ ಬೆಳಗ್ಗಿನ ಹೊತ್ತಿನಲ್ಲಿ ಸಿದ್ಧರಾಮನು ಓಡೋಡಿ ಮನೆಗೆ ಬಂದು ಅಕ್ಕನನ್ನೂ, ಬಾವನನ್ನೂ, ಪರಿವಾರದವರನ್ನೂ ಕರೆದುಕೊಂಡು ಬಂದೆನೆಂದೂ, ಅವರೆಲ್ಲಾ ಆಲಯದ ಹತ್ತಿರ ಇದ್ದಾರೆಂದೂ ಹೇಳಿದನು. ಸಿದ್ಧರಾಮನ ತಾಯಿ ಆನಂದಾಶ್ಚರ್ಯಗಳಿಂದ ಆಲಯಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನೂ, ವಿನಾಯಕ, ಕುಮಾರಸ್ವಾಮಿಯನ್ನೂ, ಇತರ ಶಿವ ಪರಿವಾರವನ್ನೂ ಕಣ್ಣಾರೆ ದರ್ಶನಮಾಡಿ ಅವರನ್ನೆಲ್ಲಾ ತನ್ನ ಮನೆಗೆ ಕರೆದಳು.

ಅವರೆಲ್ಲಾ ಬರುವಾಗ ಅವಳ ಹಳೆಯ ಮನೆಯ ಸ್ಥಳದಲ್ಲಿ ದಿವ್ಯ ಭವನವಿದ್ದಿತು. ಅತಿಥಿಗಳೆಲ್ಲಾ ಅದರೊಳಗೆ ಪ್ರವೇಶಿಸಿದರು. ಆ ದಿನ ಊರವರೆಲ್ಲ ಹೊಸತಾಗಿ ಬೆಳಗುವ ಆ ಮನೆಯನ್ನು ನೋಡಿ ಆಶ್ಚರ್ಯಪಟ್ಟರು. ಮನೆಯ ಬಾಗಿಲುಗಳು ಮುಚ್ಚಿದ್ದುವು. ಒಳಗೆ ಅಪಾರ ಗದ್ದಲ! ಸಂಭ್ರಮ!

ದೀಪಾವಳಿಗೆ ಸಿದ್ಧರಾಮನ ಅತಿಥಿಗಳಾಗಿ ಬಂದ ಪಾರ್ವತೀ ಪರಮೇಶ್ವರರು ಸಿದ್ಧರಾಮನನ್ನೂ, ಅವನ ತಾಯಿಯನ್ನೂ ತಮ್ಮೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಹೋದರು.

ಒಂದುಸಾರಿ ಗಯಾಸುರನೆಂಬ ರಾಕ್ಷಸನು ಮೂರು ಲೋಕಗಳನ್ನೂ ಆಕ್ರಮಿಸಿ ಕೈಲಾಸದ ಮೇಲೆ ಕೂಡಾ ಮುಗಿಬಿದ್ದನು. ಶಿವನು ತನ್ನ ಜಟಾಜೂಟವನ್ನು ಬಿಚ್ಚಿಹಾಕಲು, ಆದರಿಂದ ಭಯಂಕರವಾದ



ಮುಖದಿಂದ, ಗುಡ್ಡದಂತಹ ಶರೀರದಿಂದ ಒಬ್ಬ ಘೋರಾಕಾರದವನು ಹುಟ್ಟಿ ಹಾರಿ ರಾಕ್ಷಸನನ್ನು ಕಬಳಿಸಲು ಬಂದನು. ಗಯಾಸುರನು ಭಯದಿಂದ ಗಡಗಡ ನಡುಗುತ್ತ, ಶಿವನನ್ನೇ ಶರಣು ಬೇಡಿದನು. ಆಗ ಶಿವನು ಶಾಂತನಾಗಿ ಅವನಿಗೆ ಅಭಯವಿತ್ತನು.

ಭಯಂಕರ ಮುಖದವನು ಏನು ಮಾಡಬೇಕೆಂದು ತೋರದೆ, "ಹಸಿವೆ! ಹಸಿವೆ! ತಿನ್ನಲು ಬೇಕು!" ಎಂದು ಕೂಗತೊಡಗಿದನು.

"ನಿನ್ನ ಶರೀರವನ್ನೇ ತಿಂದು ಹಸಿವೆ ತಣಿಸಿಕೋ!" ಎಂದನು ಶಿವ ಅವನಿಗೆ.

ಶಿವಾಜ್ಞೆಯನ್ನು ಶಿರಸಾವಹಿಸಿ ಭಯಂಕರ ಮುಖನು ತನ್ನ ಶರೀರವನ್ನೆಲ್ಲಾ ತಾನೇ ತಿಂದು ಬರೀಮುಖ ಮಾತ್ರದಿಂದ ಉಳಿದನು. ಶಿವನು ಪ್ರೀತನಾಗಿ ಆ ಮುಖಕ್ಕೆ "ಕೀರ್ತಿಮುಖ"ನೆಂದು ಹೆಸರಿಟ್ಟು, "ಎಲೋ ಕೀರ್ತಿಮುಖಾ, ನೀನು ಎಲ್ಲಾ ದೇವತೆಗಳ ತಲೆಯ ಮೇಲೆಯೂ ಇದ್ದು, ಅವರಿಗೆ ಸತ್ಕೀರ್ತಿಯನ್ನುಂಟುಮಾಡಿಕೊಂಡಿರು!" ಎಂದು ವರಕೊಟ್ಟನು.

ಹೀಗೆ ಶಿವನ ಅಂಶದಿಂದ ಕೀರ್ತಿಮುಖನಾದವನು, ಮಕರತೋರಣಗಳ ನಡುವೆ, ಪ್ರತಿ ದೇವತಾ ಮೂರ್ತಿಯ ನಡುನೆತ್ತಿಯ ಮೇಲೆ ನೆಲೆನಿಂತು ಅಲಂಕಾರ ಪ್ರಾಯದವನಾದನು.

ಬದರಿಕಾಶ್ರಮದಲ್ಲಿ ದುರ್ವಾಸ ಮುನಿ ತಪಸ್ಸು ಮಾಡಿಕೊಂಡಿದ್ದನು. ಒಂದು ದಿನ ಮಧ್ಯಾಹ್ನದ ಹೊತ್ತಿನಲ್ಲಿ ಅವನು ದೇವತಾರ್ಚನೆಮಾಡಿ, ಅಗ್ನಿ ಕಾರ್ಯ ಮುಗಿಸಿ ಹವಿಶ್ಶೇಷವನ್ನು ಜಿಂಕೆ ಮರಿಗಳಿಗೆ ತಿನ್ನಿಸಿಕೊಂಡಿರುವಾಗ, ತುಂಬುರುವೆಂಬ ಪ್ರಮಥನು ಆಕಾಶ ಮಾರ್ಗದಲ್ಲಿ ತನ್ನ ಹೆಂಡತಿಯೊಂದಿಗೆ ಹೋಗುತ್ತಿದ್ದನು. ಅವನು ದುರ್ವಾಸಾಶ್ರಮದ ಮುಂದಿರುವ ಜಿಂಕೆ ಮರಿಗಳನ್ನು ನೋಡಿ ಚಿಟಿಕೆ ಬಾರಿಸಿದನು. ಅದನ್ನು ಕೇಳಿ ಜಿಂಕೆ ಮರಿಗಳು ಹೆದರಿ ಅತ್ತಿತ್ತ ಓಡಿದುವು. ಇದರಿಂದ ಮೂಗಿನ ಕುಡಿಯಲ್ಲೇ ಕೋಪವಿರುವ ದುರ್ವಾಸನು ತುಂಬುರುವನ್ನು ನೋಡಿ ಮನುಷ್ಯ ಜನ್ಮ ಎತ್ತುವಂತೆ ಶಾಪ ಕೊಟ್ಟನು.

ಅದನ್ನು ಕೇಳಿ ತುಂಬುರು ಹೆದರಿ ವಿಮಾನದಿಂದ ಇಳಿದು ಬಂದು, "ಸ್ವಾಮಿ, ನಿಮ್ಮ ಜಿಂಕೆ ಮರಿಗಳನ್ನು ನೋಡಿ ಪ್ರೀತಿಯಿಂದ ಚಿಟಿಕೆ ಬಾರಿಸಿದರೆ ಅದು ನನ್ನನ್ನು ನಿಮ್ಮ ಶಾಪಕ್ಕೆ ಒಳಪಡಿಸಿತು. ನಿಮ್ಮ ಶಾಪಕ್ಕೆ ಇದಿರಿಲ್ಲವಾದುದರಿಂದ ಹಾಗೆಯೇ ಮನುಷ್ಯ ಜನ್ಮ ಎತ್ತುತ್ತೇನೆ. ಆದರೆ ಆ ಜನ್ಮದಲ್ಲಿ ನನಗೆ ಶಿವಭಕ್ತಿ ಇರುವ ಹಾಗೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು. ಹಾಗೆಯೇ ಆಗಲೆಂದು ಅನುಗ್ರಹ ಮಾಡಿದನು ದುರ್ವಾಸ.

ಹಾಗೆ ದುರ್ವಾಸನ ಶಾಪವನ್ನು ಅನುಭವಿಸಲು ತುಂಬುರು ಕಾಂಚೀ ಪಟ್ಟಣದಲ್ಲಿ ವೈಶ್ಯ ಕುಟುಂಬದ ಒಂದು ಮನೆಯಲ್ಲಿ ಹುಟ್ಟಿದನು. ಅವನಿಗೆ ಚಿರು

ತೊಂಡನೆಂದು ಹೆಸರಿಟ್ಟರು. ಅವನ ಹೆಂಡತಿ ಕೂಡಾ ತಿರುವೆಂಗನಾಚಿ ಎಂಬ ಹೆಸರಿನಲ್ಲಿ ಹುಟ್ಟಿ, ಚಿರುತೊಂಡನಿಗೆ ಹೆಂಡತಿಯಾಗಿ ಬಂದಳು. ಅವರಿಗೆ ಸಿರಯಾಳನೆಂಬೊಬ್ಬ ಮಗನು ಹುಟ್ಟಿದನು.

ಚಿರುತೊಂಡನು ವೀರ ಶೈವಾಚಾರದಲ್ಲಿ ನಿಷ್ಠಾ ಪರಾಯಣನಾಗಿದ್ದನು. ಅವನು ಏಕಾಮ್ರನಾಥನನ್ನು ಅರ್ಚಿಸುತ್ತ ಶಿವಭಕ್ತರನ್ನು ಸೇವಿಸುತ್ತಿದ್ದನು. ಶಿವ ಭಕ್ತರು ಯಾವ ಸಮಯದಲ್ಲಿ ಬಂದು ಯಾವುದು ಬೇಕೆಂದು ಕೇಳಿದರೂ ಶಕ್ತಿವಂಚನೆಯಿಲ್ಲದೆ ಕೊಡುವವನು ಚಿರುತೊಂಡ.

ಒಂದು ದಿನ ಅವನ ಮನೆಗೆ ಒಬ್ಬ ಶಿವಭಕ್ತನು ಬಂದು ಚಿರುತೊಂಡನನ್ನು ಆಶೀರ್ವಾದ ಮಾಡಿ, ಪೂಜಿಸಲ್ಪಟ್ಟು, "ಅಪ್ಪಾ, ನಿತ್ಯವೂ ಶಿವನನ್ನು ಕಬ್ಬಿನ ರಸದಿಂದ ಅಭಿಷೇಕ ಮಾಡಿ ಅರ್ಚಿಸುವುದು ನನ್ನ ವ್ರತ. ಆದುದರಿಂದ ನನಗೆ ಒಂದು ಬಿಂದಿಗೆ ತುಂಬ ಕೈಯಿಂದಲೇ ಗಾಣ ಹಾಕಲ್ಪಟ್ಟ ಕಬ್ಬಿನ ರಸವು ಬೇಕಾಗಿದೆ" ಎಂದನು.

ಚಿರುತೊಂಡನು ಬಹಳ ಸಂತೋಷಪಟ್ಟು ಕಬ್ಬಿನ ಜಲ್ಲೆಗಳನ್ನು ಕೊಂಡು ಕೊಂಡು ಬರಲು ಹಣದೊಂದಿಗೆ ಹೊರಟು ಹೋದನು.

ಒಂದು ಬಿಂದಿಗೆಯಷ್ಟು ರಸಬೇಕಾದರೆ ನೂರು ಕಬ್ಬಿನ ಜಲ್ಲೆಗಳು ಬೇಕು. ಅಂತಲೇ ಚಿರುತೊಂಡನು ನೂರು ಕಬ್ಬಿನ ಜಲ್ಲೆಗಳನ್ನು ಕೊಂಡು ಕೊಂಡು ಕಟ್ಟಿಸಿದನು. ಆದರೆ ಅಷ್ಟು ದೊಡ್ಡ ಭಾರವನ್ನು ಎತ್ತಲು ಅವನಿಗೆ ಸಾಧ್ಯವಾಗಿಲ್ಲ. ಆಗ ಶಿವನೇ ಮನುಷ್ಯ ರೂಪದಲ್ಲಿ ಅವನ ಬಳಿಗೆ ಬಂದು ಅವನ ಹೊರೆಗೆ ತನ್ನ ಹೆಗಲನ್ನೂ ಕೊಟ್ಟನು. ಹೀಗೆ ಇಬ್ಬರೂ ಹೊತ್ತು ಮನೆಗೆ ತಂದು ಹಾಕಿದ ಕೂಡಲೇ ಶಿವನು ಮಾಯವಾಗಿ ಹೋದನು.

ಅವನು ಥಕ್ಕನೆ ಮಾಯವಾದುದನ್ನು ನೋಡಿ ಚಿರುತೊಂಡನು ಆಶ್ಚರ್ಯಪಡುತ್ತ, ಕಬ್ಬಿನ ಜಲ್ಲೆಗಳನ್ನು ಕೈಯಿಂದಲೇ ಗಾಣವಾಡಿಸಿ ರಸ ತೆಗೆದು ಬಿಂದಿಗೆಯಲ್ಲಿ ತುಂಬಿಸಿದನು. ಹೀಗೆ ಒಂದು ಬಿಂದಿಗೆ ಕಬ್ಬಿನ ರಸದಿಂದ ಶಿವನಿಗೆ ಅಭಿಷೇಕವಾಯಿತು.

ಕೈಲಾಸದಲ್ಲಿ ಪಾರ್ವತೀದೇವಿ ಶಿವನ ಕಂಠ ಪ್ರದೇಶವೆಲ್ಲಾ ಬೆವರಿನಿಂದ ಒದ್ದೆಯಾಗಿರುವುದನ್ನು ನೋಡಿ ಕಾರಣವೇನೆಂದು ಕೇಳಿದಳು. ಶಿವನು ಅವಳಿಗೆ ಚಿರುತೊಂಡನ ಸಮಾಚಾರವನ್ನು ಹೇಳಿ, "ನನ್ನ ಭಕ್ತನು ಕಬ್ಬಿನ ಹೊರೆ ಹೊತ್ತುಕೊಳ್ಳಲಾಗದೆ ಕಷ್ಟಪಡುವುದನ್ನು ನೋಡಿ ಸಹಾಯ ಮಾಡಿದೆನು. ಅವನಿಗೆ ಬೆವರು ಸುರಿದ ಹಾಗೆಯೇ ನನಗೂ ಬೆವರು ಸುರಿಯಿತು" ಎಂದನು. ಅಂತಹ ಭಕ್ತನನ್ನು ತಾನು ಕೂಡಾ ನೋಡಬೇಕೆಂದು ಪಾರ್ವತಿಗೆ ಆಶೆಯಾಯಿತು.

